# 64
# ಕಲೆಗಳು

ಮ. ಶ್ರೀಧರಮೂರ್ತಿ



ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು-560 056

64 KALEGALU by M. Sridharamurthy. Published by Prasaranga, Bangalore University, Bangalore. Pp. 70+viii.



ಮೊದಲನೆಯ ಮುದ್ರಣ 1974
ಎರಡನೆಯ ಮುದ್ರಣ 2001

ಪ್ರಕಾಶಕರು ಮತ್ತು ಮುದ್ರಕರು
**ಡಾ॥ ಸಿ. ವೀರಣ್ಣ**
ನಿರ್ದೇಶಕರು
ಪ್ರಸಾರಾಂಗ ಮತ್ತು ಮುದ್ರಣಾಲಯ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-560 056

**ಬೆಲೆ : ರೂ. 10/–**

ಮಾರಾಟ ವಿಭಾಗ ಮತ್ತು ಪ್ರತಿಗಳು ದೊರೆಯುವ ಸ್ಥಳ
**ಶ್ರೀ ಹೆಚ್. ಪುಂಡಲೀಕ**
ಸಹಾಯಕ ನಿರ್ದೇಶಕರು
ಪ್ರಸಾರಾಂಗ, ಅರಮನೆ ರಸ್ತೆ, ಸೆಂಟ್ರಲ್ ಕಾಲೇಜು, ಬೆಂಗಳೂರು-1

# ಕುಲಪತಿಗಳ ಮಾತು

ಜಗತ್ತಿನಲ್ಲಿ ಜ್ಞಾನಪ್ರಸಾರಕ್ಕೆ ಹಲವಾರು ಮಾರ್ಗಗಳು ರೂಪುಗೊಂಡಿವೆ. ಒಂದು ಕಾಲಕ್ಕೆ ಬಾಯಿಂದ ಬಾಯಿಗೆ ಸೀಮಿತವಾಗಿದ್ದ ಅಭ್ಯಾಸ ಕ್ರಮವನ್ನು ಹಿಂದೆ ಹಾಕಿ ನೂರಾರು ರೀತಿಯಲ್ಲಿ ಜ್ಞಾನದಾಹವನ್ನು ತಣಿಸಿಕೊಳ್ಳಲು ಮನುಷ್ಯ ಪ್ರಯತ್ನಿಸಿ ಸಫಲವಾಗಿದ್ದಾನೆ. ವಿಶ್ವವಿದ್ಯಾಲಯ ನಾಲ್ಕು ಗೋಡೆಗಳ ನಡುವೆ ಮಾತ್ರ ಜ್ಞಾನ ಪ್ರಸಾರ ಮಾಡುವುದಕ್ಕೇ ಸೀಮಿತವಾಗುವಂತಿಲ್ಲ. ತರಗತಿಯ ಕೊಠಡಿಗಳಾಚೆ ಇರುವ ಕೋಟ್ಯಾಂತರ ಜ್ಞಾನದಾಹಿಗಳ ಹಸಿವನ್ನು ತಣಿಸುವುದು ಕೂಡ ಅದರ ಕರ್ತವ್ಯಗಳಲ್ಲಿ ಒಂದಾಗಬೇಕು. ಈ ದಿಕ್ಕಿನಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಪ್ರಚಲಿತ ವಿದ್ಯಮಾನಗಳ ಬಗ್ಗೆ, ಜಗತ್ತಿನ ಪ್ರಮುಖ ಜ್ಞಾನ ವಿಜ್ಞಾನ ಶಾಖೆಗಳ ಬೆಳವಣಿಗೆಗಳನ್ನು ಕುರಿತು ತಜ್ಞರಿಂದ ಉತ್ತಮ ಕೃತಿಗಳನ್ನು ಬರೆಸಿ ಪ್ರಕಟಿಸುತ್ತಾ ಬಂದಿದೆ. ಇನ್ನು ಮುಂದೆಯೂ ಕೂಡ ಆ ಕೆಲಸವನ್ನು ಮತ್ತಷ್ಟು ಹುರುಪಿನಿಂದ ಮುಂದು ವರೆಸುವುದು ಪ್ರಮುಖ ಕರ್ತವ್ಯವೆಂದು ನಂಬಿದೆ.

ಹೊಸ ಪುಸ್ತಕಗಳ ರಚನೆ ಮಾತ್ರವಲ್ಲದೆ ಈಗಾಗಲೇ ಪ್ರಕಟವಾಗಿ, ಓದುಗರಿಗೆ ಲಭ್ಯವಿಲ್ಲದ ಬೇಡಿಕೆ ಇರುವ ಉತ್ತಮ ಕೃತಿಗಳ ಪುನರ್ ಮುದ್ರಣ ಕಾರ್ಯವನ್ನು ಸಹ ಪ್ರಸಾರಾಂಗ ಹಮ್ಮಿಕೊಂಡಿದೆ. ಈ ವರ್ಷದಲ್ಲಿ ಪ್ರಸಾರಾಂಗ ಪ್ರಕಟಿಸಿರುವ ಕೃತಿಗಳಲ್ಲಿ 50 ಪುಸ್ತಕಗಳನ್ನಾದರೂ ಪುನರ್ ಮುದ್ರಿಸಿ ಓದುಗರಿಗೆ ಸಿಕ್ಕುವಂತೆ ಮಾಡಬೇಕೆಂಬ ಉದ್ದೇಶವಿಟ್ಟುಕೊಳ್ಳಲಾಗಿದೆ. ವಿಶ್ವವಿದ್ಯಾಲಯ ಎದುರಿಸುತ್ತಿರುವ ಹಣಕಾಸಿನ ಮುಗ್ಗಟ್ಟಿನ ನಡುವೆಯೂ, ಜ್ಞಾನ ಪ್ರಸಾರಕ್ಕೆ ಅಡ್ಡಿಯಾಗಬಾರದೆಂಬ ಸದುದ್ದೇಶದಿಂದ ಈ ತೀರ್ಮಾನಕ್ಕೆ ಬರಲಾಗಿದೆ.

ಮರು ಮುದ್ರಣ ಯೋಜನೆಯಡಿ ಉತ್ತಮ ಪುಸ್ತಕಗಳನ್ನು ಪ್ರಕಟಿಸುತ್ತಿರುವ ಪ್ರಸಾರಾಂಗ ಮತ್ತು ಮುದ್ರಣಾಲಯದ ನಿರ್ದೇಶಕರಾದ ಡಾ. ಸಿ. ವೀರಣ್ಣ ಮತ್ತು ಅವರ ಸಹೋದ್ಯೋಗಿಗಳಿಗೆ, ಅವರ ಕಾರ್ಯದಲ್ಲಿ ಹೆಚ್ಚಿನ ಯಶದೊರಕಲೆಂದು ಹಾರೈಸಿ, ನಮ್ಮ ಪ್ರಕಟಣೆಗಳನ್ನು ಸಾರ್ವಜನಿಕರು ಸ್ವಾಗತಿಸುತ್ತಾರೆಂದು ನಂಬಿದ್ದೇನೆ.

**ಡಾ|| ಕೆ. ಸಿದ್ದಪ್ಪ**
ಕುಲಪತಿಗಳು

## ನಿರ್ದೇಶಕರ ನುಡಿ

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಕಳೆದ ದಶಕಗಳಲ್ಲಿ ಸಾಹಿತ್ಯ ಮತ್ತು ವೈಜ್ಞಾನಿಕ ವಿಷಯಗಳಲ್ಲಿ ಅನೇಕ ಮೌಲಿಕ ಕೃತಿಗಳನ್ನು ಪ್ರಕಟಿಸಿದೆ. ಇತ್ತೀಚಿನ ದಿನಗಳಲ್ಲಿ ವಿಶ್ವವಿದ್ಯಾಲಯದ ಹಣಕಾಸಿನ ಮುಗ್ಗಟ್ಟಿನಿಂದಾಗಿ ಹೊಸ ಕೃತಿಗಳ ಪ್ರಕಟಣೆ ಸಾಧ್ಯವಾಗಿರಲಿಲ್ಲ. ಓದುಗರಿಂದ ಬೇಡಿಕೆ ಇದ್ದರೂ ಈಗಾಗಲೇ ಪ್ರಕಟವಾಗಿ ಅಲಭ್ಯವಾಗಿರುವ ನಮ್ಮ ಪ್ರಕಟಣೆಗಳನ್ನು ಕೂಡ ಮರು ಮುದ್ರಿಸುವ ಕಾರ್ಯವೂ ಕೈಗೂಡಿರಲಿಲ್ಲ. ಹೊಸ ಪುಸ್ತಕಗಳ ಪ್ರಕಟಣೆಗೆ ನೆರವಾಗುವುದರ ಜೊತೆಗೆ, ನಮ್ಮ ಈಗಿನ ಕುಲಪತಿಗಳಾದ ಡಾ॥ ಕೆ. ಸಿದ್ದಪ್ಪನವರ ಕ್ರಿಯಾಶೀಲ ಪ್ರೋತ್ಸಾಹದಿಂದಾಗಿ, ಪ್ರಸಾರಾಂಗ ಈ ಹಿಂದೆ ಪ್ರಕಟಿಸಿರುವ 50 ಮೌಲಿಕ ಕೃತಿಗಳ ಮರುಮುದ್ರಣ ಕಾರ್ಯವನ್ನು ಕೈಗೆತ್ತಿಕೊಳ್ಳಲು ಸಾಧ್ಯವಾಗಿದ್ದು, ಅದಕ್ಕಾಗಿ ಅವರಿಗೆ ನಾನು ಆಭಾರಿಯಾಗಿದ್ದೇನೆ. ಈ ಪುಸ್ತಕಗಳನ್ನು ಮುದ್ರಿಸಿ ಪ್ರಕಟಿಸಲು ಸಹಕರಿಸಿದ ಪ್ರಸಾರಾಂಗ ಮತ್ತು ಮುದ್ರಣಾಲಯದ ಸಿಬ್ಬಂದಿಗೆ ನನ್ನ ಕೃತಜ್ಞತೆಗಳು.

**ಡಾ॥ ಸಿ. ವೀರಣ್ಣ**
ನಿರ್ದೇಶಕರು
ಪ್ರಸಾರಾಂಗ ಮತ್ತು ಮುದ್ರಣಾಲಯ

## ಪರಿವಿಡಿ

# ಪೀಠಿಕೆ

ಪ್ರಾಚೀನ ಭಾರತೀಯರು ಸಾಮಾಜಿಕ ಸ್ವಾಸ್ಥ್ಯಕ್ಕೆ ವೈಯಕ್ತಿಕ ಸಂಸ್ಕೃತಿ ಮುಖ್ಯ ಸಾಧನ ಎಂದು ತಿಳಿದಿದ್ದರು. ಸಂಸ್ಕೃತಿ, ಕಲೆ ಮೊದಲಾದ ಶಬ್ದಗಳನ್ನು ನಾವಿಂದು ಬಳಸುತ್ತಿರುವಷ್ಟು ಧಾರಾಳವಾಗಿ ಬಳಸದಿದ್ದರೂ ಜೀವನದಲ್ಲಿ ಅವುಗಳನ್ನು ಮೈಗೂಡಿಸಿಕೊಳ್ಳಲು ಸತತವಾಗಿ ಪ್ರಯತ್ನಿಸುತ್ತಿದ್ದರು. ಸುಸಂಸ್ಕೃತವೂ, ಕಲಾತ್ಮಕವೂ ಆದ ಜೀವನ ಕೇವಲ ಸಾಮಾಜಿಕ ವ್ಯವಸ್ಥೆಯ ಅಂಗವಾಗಿರಲಿಲ್ಲ, ಅದು ಆಧ್ಯಾತ್ಮಿಕ ಸಾಧನೆಯ ಮಾರ್ಗವೂ ಆಗಿತ್ತು. ನಮ್ಮ ಕಾವ್ಯ-ನಾಟಕಗಳ ಧೀರೋದಾತ್ತ ನಾಯಕರೆಲ್ಲ "ಚತುಃಷಷ್ಟಿ ಕಲಾಗಮ ಪ್ರಯೋಗ ಚತುರು"ರೇ ಆಗಿದ್ದರು. ಉನ್ನತ ಅಧಿಕಾರ ನಿರ್ವಹಣೆಗೆ ಮತ್ತು ನಾಗರಿಕನೆಂಬ ಪ್ರಶಸ್ತಿಗೆ ಅರವತ್ತುನಾಲ್ಕು ಕಲೆಗಳ ಅರಿವು ಅಗತ್ಯ ಅರ್ಹತೆಯಾಗಿತ್ತು.

### ಕಲೆ ಎಂದರೇನು ?

ಸಂಸ್ಕೃತದ 'ಕಲಾ' ಎಂಬುದೇ ಕನ್ನಡದಲ್ಲಿ ಕಲೆಯಾಗಿದೆ. ಕಲಾ ಎಂದರೆ ಚಂದ್ರನ ಹದಿನಾರನೆಯ ಒಂದು ಅಂಶ ಎಂಬುದೇ ಅರ್ಥ. "ಕಲಾತು ಷೋಡಶೋ ಭಾಗೋ"–ಎನ್ನುತ್ತದೆ ಅಮರ. 'ಕಲಾ'–ಎಂದರೆ ಗತಿ, ನಡೆ, ಅರ್ಥ, ಜ್ಞಾನ, ತಿಳಿವಳಿಕೆ ಎಂದೂ ಅರ್ಥವಾಗುತ್ತದೆಂದು ನಿಘಂಟುಕಾರರೆನ್ನುತ್ತಾರೆ. "ಕಲಾಶಿಲ್ಪೇ"–ಎಂದೂ ಅಮರಕೋಶದಲ್ಲಿ ಹೇಳಿದೆ. ಅಂದರೆ ಶಿಲ್ಪವೇ ಮೊದಲಾದ ಕುಶಲ ವಿದ್ಯೆಗಳಿಗೂ ಕಲಾ ಎಂಬ ಶಬ್ದವನ್ನು ಬಹಳ ಹಿಂದಿನ ಕಾಲದಿಂದ ಬಳಸಲಾಗುತ್ತಿದೆ ಎಂದು ಭಾವಿಸಬಹುದು. ಆದರೆ ಖಚಿತವಾಗಿ ಎಂದಿನಿಂದ ಈ ಪದವನ್ನು ಇಂದಿನ ಅರ್ಥದಲ್ಲಿ ಬಳಸಲಾಗುತ್ತಿದೆ ಎಂಬುದು ಸ್ಪಷ್ಟವಾಗಿಲ್ಲ.

ಋಗ್ವೇದದಲ್ಲಿ ಒಂದು ಕಡೆ 'ಕಲಾ' ಎಂಬ ಶಬ್ದ ಪ್ರಯೋಗವಿದೆ[1]. ಇನ್ನೊಂದು ಕಡೆ 'ಪ್ರಕಲ್ಯವಿತ್' ಎಂಬ ಶಬ್ದವಿದೆ.[2] 64 ಕಲೆಗಳ ಬಗ್ಗೆ ಬರೆದಿರುವ ಒಬ್ಬಿಬ್ಬ ಲೇಖಕರು ಈ ಮಂತ್ರಗಳನ್ನು ಉದ್ಧರಿಸಿ ಋಗ್ವೇದದಲ್ಲಿಯೇ ಕಲಾ ಎಂಬ ಶಬ್ದ ಈಗಿನ ಅರ್ಥದಲ್ಲಿ ಬಳಸಲ್ಪಟ್ಟಿದೆ ಎಂದಿದ್ದಾರೆ.[3] ಆದರೆ ಇವುಗಳಲ್ಲಿ ಮೊದಲನೆಯದಾದ 'ಕಲಾ' ಶಬ್ದಕ್ಕೆ ಭಾಷ್ಯಕಾರರು "ಪಶುವಿನ ಹೃದಯಾದ್ಯವಯವಗಳು" ಎಂದು ಅರ್ಥ ಮಾಡಿದ್ದಾರೆ[4]. "ಪ್ರಕಲ್ಯವಿತ್" ಎಂಬ ಶಬ್ದವನ್ನು "ಪ್ರಕಲಾವಿದ್" ಎಂದು ತಪ್ಪಾಗಿ ಉಚ್ಚರಿಸಿ ತಪ್ಪು ಅರ್ಥ ಮಾಡಲಾಗಿದೆ[5].

ಉಪನಿಷತ್ತುಗಳಲ್ಲಿ "ವಿದ್ಯೆ"ಯನ್ನು ಕುರಿತು ಅನೇಕ ಕಡೆ ಪ್ರಸ್ತಾಪವಿದ್ದರೂ, ಎಲ್ಲಿಯೂ 'ಕಲೆ' ಎಂಬ ಶಬ್ದ ಕಾಣಬರುವುದಿಲ್ಲ. ಮಹರ್ಷಿ ನಾರದರು ಛಾಂದೋಗ್ಯೋಪನಿಷತ್ತಿನಲ್ಲಿ ತಮ್ಮ ಅರ್ಹತೆಗಳನ್ನು ಹೇಳಿಕೊಳ್ಳುವ ಸಂದರ್ಭವಿದೆ. ಅಲ್ಲಿ ಅವರು ತಮಗೆ "ದೇವಜನ ವಿದ್ಯೆ" ತಿಳಿದಿದೆ ಎಂದು ಹೇಳಿಕೊಂಡರೂ 'ಕಲಾ' ಎಂಬ ಶಬ್ದವನ್ನು ಪ್ರಯೋಗಿಸಿಲ್ಲ,

ಸುಪ್ರಸಿದ್ಧ ಪುರಾಣಗಳಾದ ಅಗ್ನಿಪುರಾಣ, ವಿಷ್ಣುಪುರಾಣ, ಮೊದಲಾದವುಗಳಲ್ಲಿ ಶಿಲ್ಪ, ಸಂಗೀತ ಮೊದಲಾದುವುಗಳ ಬಗ್ಗೆ ವಿವರಗಳಿದ್ದರೂ ಕಲೆಯ ಹುಟ್ಟಿನ ಬಗ್ಗೆ ಉಲ್ಲೇಖವಿಲ್ಲ, ವಿಷ್ಣುಧರ್ಮೋತ್ತರದಲ್ಲಿ ರಾಜನ ಬಳಿ ಜ್ಯೋತಿಷಿಯಾದವನು "ಚತುಃಷಷ್ಟ್ಯಂಗತತ್ವಜ್ಞ" ನಾಗಿರಬೇಕೆಂದಿದ್ದರೂ ಆ "ಚತುಃಷಷ್ಟ್ಯಂಗ"ಗಳ ಹುಟ್ಟು ಬೆಳವಣಿಗೆಯನ್ನು ವಿವರಿಸಿಲ್ಲ. ಆದರೆ ಅಷ್ಟೇನೂ ಪ್ರಸಿದ್ಧವಲ್ಲದ ಕಾಳಿಕಾಪುರಾಣದಲ್ಲಿ "64 ಕಲೆಗಳು ಸಂಖ್ಯೆಯಿಂದ

---

1 ಋಗ್ವೇದ, 8-47-17

2 ಅದೇ 7-18-15

3 ವಾತ್ಸ್ಯಾಯನ ಕಾಮಸೂತ್ರ-ದೇವಧರಶಾಸ್ತ್ರಿ ಸಂಪಾದಿತ ಪುಟ 63

4 ಋಗ್ವೇದ-ಜ. ಚಾ. ಗ್ರಂಥಮಾಲಾ ಪುಟ 545

5 JRAS-1914, Pages 355-356

6 ದೇವಜನ ವಿದ್ಯೆ - ನೃತ್ಯ, ಗೀತ, ವಾದ್ಯ, ಶಿಲ್ಪ, ಪರಿಮಳ ದ್ರವ್ಯ ತಯಾರಿಕೆ ಇತ್ಯಾದಿ, ಛಾಂದೋಗ್ಯ 7-1-2

ಹುಟ್ಟಿದವು" – ಎಂಬ ಕಥೆ ಒಂದುಂಟು. ಕಾಳಿಕಾಪುರಾಣಕ್ಕೂ ಬಹಳ ಹಿಂದಿನವಾದ ರಾಮಾಯಣ, ಭಾರತ, ಕೆಲ ಕಾವ್ಯಗಳು, ಕಾಮಶಾಸ್ತ್ರ, ಅರ್ಥಶಾಸ್ತ್ರಗಳಲ್ಲಿ ಆ ವೇಳೆಗಾಗಲೇ ಚತುಷಷ್ಟಿ ಕಲೆಗಳು ಸಾಕಷ್ಟು ಪ್ರಸಿದ್ಧಿ ಪಡೆದಿದ್ದವು.

### ಕಲೆ-ವಿದ್ಯೆ

'ಕಲಾ' ಎಂದರೇನು ? ಈ ಪ್ರಶ್ನೆಗೆ ಜಗತ್ತಿನ ನಾನಾ ವಿದ್ವಾಂಸರು ಉತ್ತರಿಸಲು ವಿಶೇಷವಾಗಿ ಶ್ರಮಿಸಿದ್ದಾರೆ. ಕಲೆ ಎನ್ನುವುದು ಮಾನವ ನಿರ್ಮಿತವಾದ ಕೃತಿ ಎಂದು ಸ್ಥೂಲವಾಗಿ ಹೇಳಬಹುದು. ವ್ಯಕ್ತಿಯಲ್ಲಿ ಉಂಟಾಗುವ ವಿವಿಧ ಭಾವಗಳಿಗೆ, ಅವನ ಪ್ರತಿಭೆ, ಕಲ್ಪನೆಗಳಿಂದ ಲಭಿಸುವ ಬಾಹ್ಯ ರೂಪವೇ ಕಲೆ ಎಂದೂ ಕೆಲವರೆನ್ನುತ್ತಾರೆ. ವ್ಯಕ್ತಿಯ ಪ್ರತಿಭೆಯಿಂದ ಮೂಡಿ ಕ್ರಿಯಾರೂಪದಲ್ಲಿ ಪ್ರಕಟವಾಗುವುದೇ ಕಲೆ ಎನ್ನುವ ಸೂತ್ರದನ್ವಯ ಶಿಲ್ಪ, ಚಿತ್ರ, ಕಾವ್ಯ, ಸಂಗೀತ ಮೊದಲಾದುವುಗಳು ಕಲೆ ಎಂಬ ಹೆಸರು ಪಡೆದಿವೆ.

ಒಂದು ಕಾಲಕ್ಕೆ ಕಲೆ, ವಿದ್ಯೆ, ವಿಜ್ಞಾನಗಳನ್ನೆಲ್ಲ ಸಮಾನಾರ್ಥದಲ್ಲಿ ಬಳಸಲಾಗುತ್ತಿತ್ತು. ಬೃಹಸ್ಪತಿ ಚಿನ್ನದ ಆಭರಣಗಳ ರಚನೆ, ಮರಗೆಲಸ, ಕುಂಭಕಲೆ, ಸಂಗೀತ, ನೃತ್ಯಗಳೆಲ್ಲ ವಿಜ್ಞಾನ-ಶಿಲ್ಪ ಎಂದಿದ್ದಾನೆ. ಹೇಮಚಂದ್ರನೂ ವಿಜ್ಞಾನವೂ ಕಲೆಯೇ ಎಂದಿದ್ದಾನೆ. ವಾತ್ಸ್ಯಾಯನನು ಕಲೆ ಮತ್ತು ವಿದ್ಯೆ ಎರಡನ್ನೂ ಸಮಾನಾರ್ಥದಲ್ಲಿ ಬಳಸಿದ್ದಾನೆ. ಶುಕ್ರನೀತಿ ಸಾರದಲ್ಲಿ ವಿದ್ಯೆ ಮತ್ತು ಕಲೆಗಳಿಗೆ ಬೇರೆ ಬೇರೆ ಸೂತ್ರಗಳನ್ನು ಹೇಳಿ, "ಯಾವ ಯಾವ ಕರ್ಮಗಳನ್ನು ಪೂರ್ಣವಾಗಿ ಮಾತುಗಳಿಂದ ಹೇಳಲು ಶಕ್ಯವೋ ಅವುಗಳು ವಿದ್ಯೆ; ವರ್ಣಗಳನ್ನು ಉಚ್ಚರಿಸಲೂ ಶಕ್ತರಲ್ಲದ ಮೂಕರೂ ಸಹ ಕಲಿಯಲು ಸಾಧ್ಯವಾದ ನೃತ್ಯಾದಿಗಳು ಕಲೆ" ಎಂದು ವಿವರಿಸಲಾಗಿದೆ. ಆದರೆ ಅದೇ ಗ್ರಂಥದಲ್ಲಿ ಪಟ್ಟಿ ಮಾಡಿ ಕೊಟ್ಟಿರುವ 64 ಕಲೆಗಳು ಈ ಸೂತ್ರಕ್ಕೆ ಅನುಗುಣವಾಗಿಲ್ಲ.

ತಂತ್ರ ಶಾಸ್ತ್ರಜ್ಞರು ಕಲೆ ಎಂದರೆ ಅಂಶ ಅಥವ 'ಕರ್ತೃತ್ವ' ಎಂದು ಹೇಳಿ

ವರ್ಣಮಾಲೆಯ ವ್ಯಂಜನಾಕ್ಷರಗಳಲ್ಲಿ ಮೊದಲನೆಯದಾದ 'ಕ'ಕಾರಕ್ಕೆ ಕಡೆಯದಾದ 'ಲ' ಕಾರವು ಸೇರಿ ಕಲೆಯಾಗಿದೆ ಎನ್ನುತ್ತಾರೆ.

ಪ್ರಕೃತ ಕಲೆ ಎಂದರೆ ಪ್ರತಿಭಾ ಪ್ರಧಾನವಾದುದು, ವಿದ್ಯೆ ಎಂದರೆ ಅಭ್ಯಾಸ ಪ್ರಧಾನವಾದುದು ಎಂಬ ಅಭಿಪ್ರಾಯವೇ ಸಾಧುವಾದುದು ಎಂಬ ಭಾವನೆ ಉಂಟು. ಕಲೆ, ವಿದ್ಯೆ ಎರಡನ್ನೂ ಮೈಗೂಡಿಸಿಕೊಳ್ಳಲು ಪ್ರತಿಭೆ, ಅಭ್ಯಾಸಗಳೆರಡೂ ಇರಬೇಕು. ಆದರೆ ಪ್ರತಿಭೆ ಮತ್ತು ಕಲ್ಪನಾಶಕ್ತಿ ಸಾಕಷ್ಟಿಲ್ಲದವರೂ ಕೆಲಮಟ್ಟಿಗೆ ವಿದ್ಯೆಗಳಿಸಲು ಸಾಧ್ಯ. 'ಅಭ್ಯಾಸಾನುಸಾರಣೀ ವಿದ್ಯಾ'–ಎನ್ನುವುದು ಇದರಿಂದಲೇ. ಕಲೆ ಪ್ರಥಮತಃ ಕಲಿಯಬೇಕಾದ್ದು ನಿಜ. ಆದರೆ ಸ್ವಯಂ ಪ್ರತಿಭೆಯಿಂದ ಮತ್ತು ಕಲ್ಪನಾ ಸಾಮರ್ಥ್ಯದಿಂದ ಮಾತ್ರವೇ ಕಲೆಯಲ್ಲಿ ಪರಿಣತಿ ಸಾಧ್ಯ.

64 ಕಲೆಗಳೆಂದು ಪ್ರಸಿದ್ಧವಾಗಿರುವ ಕಲೆಗಳಲ್ಲಿ ವಿದ್ಯೆ ಎಂಬ ವಿಭಾಗಕ್ಕೆ ಸೇರತಕ್ಕ ವಿಷಯಗಳಿರುವಂತೆಯೇ ವಿಜ್ಞಾನ, ಲಲಿತಕಲೆ ಮತ್ತು ಕುಶಲ ಕಲೆಗಳೆಂದು ವಿಭಜಿಸಬಹುದಾದ ವಿಷಯಗಳೂ ಉಂಟು. ಇದರಿಂದ 64 ಕಲೆಗಳೆಂದು ಪಟ್ಟಿ ಮಾಡಿದವರ ಉದ್ದೇಶ ವ್ಯಕ್ತಿಯ ಸರ್ವತೋಮುಖ ಸಾಮರ್ಥ್ಯಕ್ಕೆ ಸಾಧಕವಾದ ಎಲ್ಲ ವಿಷಯಗಳನ್ನೂ ಒಂದೆಡೆ ಕಲೆ ಹಾಕುವುದೇ ಆಗಿತ್ತು ಎನ್ನಬಹುದಾಗಿದೆ.

ಇತ್ತೀಚಿನ ದಿನಗಳಲ್ಲಿ ಕಲೆಗಳನ್ನು ಲಲಿತಕಲೆ, ಕುಶಲಕಲೆ ಅಥವ ಉಪಯುಕ್ತ ಕಲೆ ಎಂದು ವಿಭಜಿಸುವುದು ಪದ್ಧತಿಯಾಗಿದೆ. ಈ ವಿಭಜನೆಯನ್ವಯ ಸಂಗೀತ, ನೃತ್ಯ, ಚಿತ್ರಕಲೆಗಳು ಲಲಿತಕಲೆಗಳೆಂದೂ, ಶಿಲ್ಪವೇ ಮೊದಲಾದವು ಕುಶಲಕಲೆಗಳೆಂದೂ ಕರೆಯಲ್ಪಡುತ್ತವೆ. ವಸ್ತುತಃ ಈ ವಿಭಜನೆ ಅತಿಸೂಕ್ಷ್ಮವಾದುದು. ಆನಂದವಷ್ಟೆ ಮುಖ್ಯ ಪ್ರಯೋಜನ ವಾದ ಸಂಗೀತ, ಕಾವ್ಯ, ಚಿತ್ರಕಲೆಗಳು ಲಲಿತಕಲೆಗಳೆಂದೂ, ಪ್ರತಿಭೆ ಕಾರ್ಯ ಕೌಶಲವಾಗಿ ಪ್ರಕಟಗೊಂಡು, ಜೀವನೋಪಭೋಗ ಸಾಧನವಾಗಿ ವಿನಿಯೋಗ ವಾದಾಗ ಕುಶಲಕಲೆಯೆಂದೂ ಭಾವಿಸಬಹುದು. ಕಲೆ ಭಾವನಾತಿಷ್ಠವಾದಾಗ ಲಲಿತಕಲೆಯೂ, ಪದಾರ್ಥನಿಷ್ಠವಾದಾಗ ಕುಶಲ ಕಲೆಯೂ ಆಗುವುದೆಂದು ಕೆಲವರೆನ್ನುತ್ತಾರೆ.

## 64—ಏಕೆ ?

ಸಂಸ್ಕೃತ ಮತ್ತು ಪ್ರಾಕೃತ ಸಾಹಿತ್ಯಗಳಲ್ಲಿ ಹಲವಾರು ಕಡೆ ಪ್ರಸ್ತಾಪಿಸಲ್ಪಟ್ಟಿರುವ ಅರವತ್ತುನಾಲ್ಕು ಕಲೆಗಳು ಯಾವುವು? ಕಲೆಗಳು 64 ಆದುದು ಏಕೆ? ಈ 64 ಕಲೆಗಳೂ ನಿಜವಾದ ಅರ್ಥದಲ್ಲಿ ಕಲೆಗಳೇನೆ ಅಥವ ವಿದ್ಯೆ, ಕಸಬು, ತಂತ್ರ, ಜೂಜು – ಎಲ್ಲವನ್ನೂ 'ಕಲೆ'ಗಳೆಂದು ಪಟ್ಟಿ ಬೆಳೆಸಲಾಗಿದೆಯೆ –ಎಂಬುವು ಕುತೂಹಲದ ಪ್ರಶ್ನೆಗಳು.

'ಅರವತ್ತುನಾಲ್ಕು' – ಎಂಬ ಸಂಖ್ಯೆ ಹೇಗೋ ಏನೋ ಆಕರ್ಷಣೀಯ ಸಂಖ್ಯೆಯಾಗಿರುವುದಂತೂ ನಿಜ. ಇದಕ್ಕೆ ಏನು ಕಾರಣ ಎಂಬುದು ಅಸ್ಪಷ್ಟ. ಕೆಲವು ಊಹೆಗಳಿಂದ ಇದು "ಹೀಗಿರಬಹುದು" – ಎಂದು ಭಾವಿಸಿರುವುದೇ ಹೆಚ್ಚು. ಚಂದ್ರಮಂಡಲದ 'ಕಲೆ'ಗಳು ಹದಿನಾರು. ಈ ಹದಿನಾರನ್ನು ನಾಲ್ಕರಷ್ಟು ಹೆಚ್ಚಿಸಿ 64 ಕಲೆಗಳೆಂದು ನಿರ್ಧರಿಸಲಾಯಿತು – ಎಂದು ಕೆಲವರ ಅಭಿಪ್ರಾಯ. ಋಗ್ವೇದವನ್ನು 10 ಮಂಡಲಗಳೆಂದು ವಿಭಜಿಸಿರುವಂತೆಯೇ ಎಂಟು ಅಷ್ಟಕಗಳೆಂದು ವಿಭಜಿಸಿರುವುದೂ ಉಂಟು. ಒಂದೊಂದು ಅಷ್ಟಕದಲ್ಲೂ ಎಂಟು ಅಧ್ಯಾಯಗಳಿದ್ದು ಈ $8 \times 8 = 64$ ಎಂಬುದೇ ಅರವತ್ತು-ನಾಲ್ಕು ವಿದ್ಯೆ ಅಥವಾ ಕಲೆಗಳ ನಿರ್ಧಾರಕ್ಕೆ ಆಧಾರ ಎಂಬ ವಾದವೂ ಉಂಟು. ಶಿವನು ಪಾರ್ವತಿಗೆ 64 "ತಂತ್ರ"ಗಳನ್ನು ಉಪದೇಶಿಸಿದನೆಂದೂ, ಈ 64 "ತಂತ್ರ"ಗಳೇ 64 ಕಲೆಗಳು ಅಥವ ಅವುಗಳನ್ನು ಕಲಿಯುವ ಸಾಧನಗಳು ಎಂದೂ ಕೆಲವರು ಅಭಿಪ್ರಾಯಪಟ್ಟು ಆ ಕಾರಣದಿಂದಲೇ ಕಲೆಗಳೂ 64 ಆದವೆನ್ನುತ್ತಾರೆ.

ಕಲೆಗಳು 64 – ಎಂದು ಸಾಮಾನ್ಯವಾಗಿ ಎಲ್ಲ ಹಿಂದೂ ಗ್ರಂಥಗಳಲ್ಲೂ ಹೇಳಲಾಗಿದ್ದರೂ ಜೈನ ಹಾಗೂ ಬೌದ್ಧ ಗ್ರಂಥಗಳಲ್ಲಿ ಇವುಗಳ ಸಂಖ್ಯೆ ಇನ್ನೂ ಹೆಚ್ಚು. "ಲಲಿತವಿಸ್ತರ"ದಲ್ಲಿ 86 ಸಮುಯಾಪಸೂತ್ರದಲ್ಲಿ 87 ಕಲೆಗಳನ್ನು ಪಟ್ಟಿಮಾಡಿಕೊಡಲಾಗಿದೆ. 'ಕಲ್ಪಸೂತ್ರ'ದ ವ್ಯಾಖ್ಯಾನ ಗ್ರಂಥವಾದ ಕಲ್ಪಾಂತರ ವಾಚ್ಯಾನಿಯಲ್ಲಿ 72 ಕಲೆಗಳನ್ನು ಹೆಸರಿಸಲಾಗಿದ್ದು ಮಾತ್ರವಲ್ಲದೆ "ಮಹಿಳಾಗುಣ"ಗಳೆಂದು ಮತ್ತೆ 64 ಕಲೆಗಳ ಪಟ್ಟಿಯೊಂದನ್ನು ನೀಡಲಾಗಿದೆ. ವಾತ್ಸ್ಯಾಯನ ಕಾಮಸೂತ್ರದಲ್ಲಿ 64 ಕಲೆಗಳ ಮೂರು ಪಟ್ಟಿಗಳಿದ್ದು ಅವುಗಳಲ್ಲಿ ಒಂದು ಕೇವಲ ರತಿಶಾಸ್ತ್ರಕ್ಕೆ ಸಂಬಂಧಿಸಿದ 'ಪಾಂಚಾಲ ಕಲೆ'ಗಳನ್ನು

ವಿವರಿಸುವುದಾಗಿದೆ.[1] ಕಾಮಸೂತ್ರದ ವ್ಯಾಖ್ಯಾನಕಾರನಾದ ಯಶೋಧರನು 512 ಕಲೆಗಳಿವೆ ಎನ್ನುತ್ತಾನೆ. ಕಾಮಸೂತ್ರದಲ್ಲಿಯೇ ಅಲ್ಲದೆ ಮಹಾಭಾರತದಲ್ಲಿ ಶಿವನು ಗಾರ್ಗ್ಯನಿಗೆ 64 ಕಲೆಗಳನ್ನು ಬೋಧಿಸಿದ ಉಲ್ಲೇಖವಿದೆ. ಆದರೆ ಅವು ಯಾವುವು ಎಂಬ ವಿವರಣೆ ಇಲ್ಲ. ರಾಮಾಯಣ, ಭಾಗವತ, ಬ್ರಹ್ಮಾಂಡ ಪುರಾಣ ಮತ್ತು ಕಾಳಿಕಾ ಪುರಾಣಗಳಲ್ಲೂ ಚತುಃಷಷ್ಟಿ ಕಲೆಗಳ ಪ್ರಸ್ತಾಪವಿದೆ. ಕಾವ್ಯಾದರ್ಶನ ಕರ್ತೃವಾದ ದಂಡಿ 'ಕಲಾಪರಿಚ್ಛೇದ'—ಎಂಬ ಪುಸ್ತಕವನ್ನೇ ಬರೆದಿದ್ದನೆಂದು ತಿಳಿದುಬರುತ್ತದೆ. ಆದರೆ ಆ ಪುಸ್ತಕ ಲಭ್ಯವಾಗಿಲ್ಲ.

### 64—ಯಾವುವು ?

ಸುಮಾರು 60 ವರ್ಷಗಳ ಹಿಂದೆ ಮೈಸೂರಿನ ವಿದ್ವಾಂಸರಾದ ಡಾ|| ಎ. ವೆಂಕಟಸುಬ್ಬಯ್ಯನವರು 64 ಕಲೆಗಳ ಬಗ್ಗೆ ಪ್ರಬಂಧ ಒಂದನ್ನು ರಚಿಸಿ ಬೆರ್ನ್ ವಿಶ್ವವಿದ್ಯಾನಿಲಯದಿಂದ ಡಾಕ್ಟರೇಟ್ ಗಳಿಸಿದರು. ಅಲ್ಲಿಂದೀಚೆಗೆ ಈ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನೆ ನಡೆದಂತೆ ಕಾಣುವುದಿಲ್ಲ. ಪ್ರಸ್ತುತ ಪುಸ್ತಕ ಸಿದ್ಧಪಡಿಸುವಾಗ ಡಾ|| ಎ. ವೆಂಕಟಸುಬ್ಬಯ್ಯನವರ ಆ ಪ್ರಬಂಧವನ್ನೇ ಮೂಲಸಾಮಗ್ರಿಯಾಗಿ ಧಾರಾಳವಾಗಿ ಬಳಸಿಕೊಳ್ಳಲಾಗಿದೆ.

ಡಾ|| ಎ. ವೆಂಕಟಸುಬ್ಬಯ್ಯನವರು ಆಗ ಅವರಿಗೆ ದೊರೆತ ಎಲ್ಲ ಆಧಾರಗಳಿಂದ 10 ಬೇರೆ ಬೇರೆ ಪಟ್ಟಿಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಆದರೆ ಈ ಪಟ್ಟಿಗಳು ಅಪೂರ್ಣವೆಂದು ಇತ್ತೀಚಿನ ಪರಿಶೀಲನೆಗಳಿಂದ ತಿಳಿದುಬರುತ್ತದೆ. ಲಲಿತಾಸಹಸ್ರನಾಮದ ಭಾಸ್ಕರರಾಯರ ಭಾಷ್ಯದಲ್ಲಿ ನೀಡಿರುವ ಮತ್ತು ಭಾಸ್ಕರರಾಯರು ಪೂರ್ವಾಧಾರವೆಂದು ಉಲ್ಲೇಖಿಸಿರುವ ಸಾರಂಗಧರೀಯ, ಶ್ರೀಧರನ ಕಥಾಕೋಶ, ಲಕ್ಷ್ಮೀಪೀಠಿಕಾ ಮತ್ತು ವಾಮಕೇಶ್ವರಿ ತಂತ್ರಗಳಲ್ಲಿನ ವಿವಿಧ ಪಟ್ಟಿಗಳು ಡಾ|| ವೆಂಕಟಸುಬ್ಬಯ್ಯನವರ ಗಮನಕ್ಕೆ ಬಂದಂತೆ ಕಾಣುವುದಿಲ್ಲ. ಭಾಸ್ಕರರಾಯರು ಆ ಗ್ರಂಥಗಳಲ್ಲಿನ ಪಟ್ಟಿಗಳಿಗಿಂತ ತಮ್ಮದು ಬೇರೆ ಎಂದು ಹೇಳಿದ್ದಾರೆ. ಈ ಪಟ್ಟಿಯನ್ನೂ ಪ್ರಸ್ತುತ ಪುಸ್ತಕದ ಅನುಬಂಧದಲ್ಲಿ ಕೊಡಲಾಗಿದೆ. ಇನ್ನುಳಿದ ಗ್ರಂಥಗಳಲ್ಲಿನ ಪಟ್ಟಿಗಳನ್ನು ಪರಿಶೀಲಿಸುವುದು ಈ ಲೇಖಕನಿಗೂ ಸಾಧ್ಯವಾಗಲಿಲ್ಲ.

---

1. ಅನುಬಂಧ ನೋಡಿ.

ಮೇಲೆ ಉಲ್ಲೇಖಿಸಿರುವ ಹಲವಾರು ಗ್ರಂಥಗಳಲ್ಲಿನ ಪಟ್ಟಿಗಳನ್ನು ಪರಿಶೀಲಿಸಿದಾಗ 64 ವಿದ್ಯೆ ಅಥವಾ ಕಲೆಗಳು ಯಾವುವು ಎಂಬ ಬಗೆಗೆ ಏಕಾಭಿಪ್ರಾಯವಿಲ್ಲದಿರುವುದು ಸ್ಪಷ್ಟವಾಗುತ್ತದೆ. ವಿವಿಧ ಅಭಿಪ್ರಾಯಗಳನ್ನು ಕ್ರೋಢೀಕರಿಸಿದಾಗ ಆಯಾ ಗ್ರಂಥ ಹಾಗೂ ನಾಯಕನ ಗುಣ ಬಣ್ಣನೆಯ ಸಂದರ್ಭಕ್ಕೆ ಅನುಗುಣವಾಗಿ ವಿವಿಧ ವಿದ್ಯೆಗಳನ್ನು ಗುಂಪುಗೂಡಿಸಿ ಒಬ್ಬೊಬ್ಬ ಗ್ರಂಥಕರ್ತೃವೂ ತನ್ನದೇ ಆದ ಪಟ್ಟಿಯೊಂದನ್ನು ರೂಪಿಸಿರುವುದು ವ್ಯಕ್ತವಾಗುತ್ತದೆ. ಈ ಎಲ್ಲವನ್ನೂ ಸಂಗ್ರಹಿಸಿ ಪುನರಾವರ್ತನೆ ಇಲ್ಲದಂತೆ ಹೊಸಪಟ್ಟಿ ತಯಾರಿಸಿದರೆ 64 ಎಂಬ ಸಂಖ್ಯೆ ಕೇವಲ ಸಾಂಕೇತಿಕವಾಗಿ ಅದರ ನಾಲ್ಕೈದರಷ್ಟು, ದೊಡ್ಡದಾದ ಪಟ್ಟಿ ರಚಿಸಬಹುದು. ಯಶೋಧರ 512 ಕಲೆಗಳಿವೆ ಎಂದಿರುವುದು ಬಹುಶಃ ಈ ದೃಷ್ಟಿಯಿಂದಲೇ ಇದ್ದರೂ ಇರಬಹುದು.

ಸಂದರ್ಭಕ್ಕೆ ಅನುಗುಣವಾಗಿ ರೂಪಿಸಲಾಗಿದೆ–ಎಂದು ಮೇಲೆ ಹೇಳಿದ ಮಾತನ್ನು ನಿದರ್ಶನಪೂರ್ವಕ ವಿವರಿಸುವುದು ಉಚಿತವಾಗಿದೆ. ವಾತ್ಸ್ಯಾಯನ ಕಾಮಸೂತ್ರದಲ್ಲಿಯೇ 64 ಕಲೆಗಳ ಎರಡು ಪಟ್ಟಿಗಳಿವೆ. ಇವುಗಳಲ್ಲಿ ಒಂದನ್ನು "ಮೂಲಕಲೆ"ಗಳೆಂದು ಕರೆಯಲಾಗಿದೆ. ಸಮಾಜ ಜೀವನದಲ್ಲಿ ಸುಸಂಸ್ಕೃತನೂ ರಸಿಕನೂ ಎಂದು ಭಾವಿಸಲ್ಪಡುವ ಪ್ರತಿಯೊಬ್ಬನು ಅರಿತಿರಬೇಕಾದ ವಿದ್ಯೆಗಳಿವು ಎನ್ನಲಾಗಿದೆ. ಇನ್ನೊಂದು ಪಟ್ಟಿ ಕೇವಲ ಕಾಮೋಪಚಾರಕ್ಕೆ ಸಂಬಂಧಪಟ್ಟಿದ್ದು ಗಣಿಕೆಯರೂ, ವೈಶಿಕರೂ ಅರಿತಿರಬೇಕಾದ ವಿದ್ಯೆಗಳಾಗಿವೆ.

ಇದೇ ರೀತಿ ಮಂತ್ರ-ತಂತ್ರ ಶಾಸ್ತ್ರಗಳಲ್ಲಿ ಉಲ್ಲೇಖಿತವಾಗಿರುವ 64 ವಿದ್ಯೆಗಳು ಪ್ರಧಾನವಾಗಿ ಆಯಾಶಾಸ್ತ್ರದ ವಿವಿಧ ವಿಭಾಗಗಳನ್ನೂ ಸಿದ್ಧಿಗಳನ್ನೂ ಹೆಸರಿಸುತ್ತವೆ. ಅಭಿಚಾರಕರ್ಮ ವಶೀಕರಣ, ವಿದ್ವೇಷಣ, ಉಚ್ಚಾಟನಾದಿ ಕ್ರಿಯೆಗಳನ್ನೂ, ಗುಟಿಕಾಸಿದ್ಧಿ, ಪಾದುಕಾಸಿದ್ಧಿ ಮೊದಲಾದ ಸಿದ್ಧಿಗಳನ್ನೂ ಈ ಶಾಸ್ತ್ರಗಳಲ್ಲಿ ಕಲೆಗಳೆಂದು ಬಣ್ಣಿಸಲಾಗಿದೆ. ಇನ್ನು ಕೆಲವು ಗ್ರಂಥಗಳಲ್ಲಿ ಪ್ರಯೋಗಾತ್ಮಕ ಗಣಿತ ಮತ್ತು ರಸಾಯನ, ಭೌತಶಾಸ್ತ್ರಕ್ಕೆ ಸಂಬಂಧಿಸಿದ ವಿಷಯಗಳನ್ನು ವಿಭಜಿಸಿ 64 ವಿದ್ಯೆಗಳನ್ನು ಕಲ್ಪಿಸಲಾಗಿದೆ. ಮಾತ್ರವಲ್ಲ ಕೆಲವು ಗ್ರಂಥಗಳಲ್ಲಿ ಸ್ವಪ್ನಜ್ಞಾನ, ಶಕುನಗಳು ಸಾಮುದ್ರಿಕ, ಜ್ಯೋತಿಷ್ಯ ಮೊದಲಾದ ವಿದ್ಯೆಗಳನ್ನು ಪಟ್ಟಿಮಾಡಲಾಗಿದೆ. ಆಧ್ಯಾತ್ಮಿಕ ತತ್ತ್ವ ನಿರೂಪಿಸುವ ಗ್ರಂಥಗಳು ವೇದ, ವೇದಾಂಗ, ಪುರಾಣ ಸ್ಮೃತಿಗಳನ್ನು

ವಿಭಜಿಸಿ 64 ವಿದ್ಯೆಗಳನ್ನು ಕಲ್ಪಿಸಿದ್ದರೆ ಅರ್ಥಶಾಸ್ತ್ರ ನೀತಿಶಾಸ್ತ್ರ ಗ್ರಂಥಗಳು ಗಜಾಶ್ವಗಳ ತರಬೇತಿ, ವ್ಯೂಹರಚನೆ, ದುರ್ಗನಿರ್ಮಾಣಗಳನ್ನು ವಿದ್ಯೆಗಳೆಂದಿವೆ.

ಈ ಎಲ್ಲ ವಿವರಣೆಯಿಂದ ಈ 64 ಕಲೆ ಅಥವಾ ವಿದ್ಯೆಗಳ ವ್ಯಾಪ್ತಿ ತುಂಬಾ ವಿಶಾಲವಾದುದು ಎಂದು ತಿಳಿಯುತ್ತದೆ. ಪ್ರಸ್ತುತ ಗ್ರಂಥದಲ್ಲಿ ವಾತ್ಸ್ಯಾಯನನ ಕಾಮಸೂತ್ರದಲ್ಲಿ ನಿರೂಪಿಸಿರುವ "ಚತುಃಷಷ್ಟಿ ಮೂಲಕಲೆ" ಗಳನ್ನು ಮಾತ್ರ ವಿವರಿಸುವ ಪ್ರಯತ್ನ ಮಾಡಲಾಗಿದೆ.

### ಕಲೆಯ ಶಿಕ್ಷಣ

ಪ್ರಾಚೀನ ಸಾಹಿತ್ಯ ಗ್ರಂಥಗಳಲ್ಲಿ ಕಲೆ ಮತ್ತು ವಿದ್ಯೆಗಳನ್ನು ಕುರಿತು ಇಷ್ಟೊಂದು ವ್ಯಾಪಕವಾಗಿ ಬರೆದಿರಬೇಕಾದರೆ ಆಗ ಕಲೆಗಳ ಬಗ್ಗೆ ಅಪಾರ ಗೌರವವೂ, ಅವುಗಳನ್ನು ಕಲಿಯುವುದು ಪರಿಪೂರ್ಣ ಶಿಕ್ಷಣದ ಲಕ್ಷಣ ಎಂಬ ನಂಬಿಕೆಯೂ ಇದ್ದಿತು ಎಂದು ಪ್ರತ್ಯೇಕವಾಗಿ ವಿವರಿಸಬೇಕಾಗಿಯೇ ಇಲ್ಲ. ಉನ್ನತಕುಲಜಾತರು, ರಾಜರು, ಮಂತ್ರಿ-ಪುರೋಹಿತರು, ಸಾರ್ವಜನಿಕ ನಾಯಕರು ಅರವತ್ತುನಾಲ್ಕು ಕಲೆಗಳನ್ನೂ ಬಲ್ಲವರಾಗಿರಬೇಕಾಗಿತ್ತು. ಸಾಕ್ಷಾತ್ ಪರಶಿವನೇ ಅರವತ್ತುನಾಲ್ಕು ಕಲೆಗಳಲ್ಲಿ ಪರಿಣತನಂತೆ. ಶ್ರೀಕೃಷ್ಣ ಬಲರಾಮ, ಗೌತಮ, ಮಹಾವೀರರೆಲ್ಲ ಅರವತ್ತುನಾಲ್ಕು ಕಲೆಗಳಲ್ಲಿ ನಿಷ್ಣಾತ ರಾಗಿದ್ದರಂತೆ. ಸಾಮಾನ್ಯವಾಗಿ ಧೀರೋದಾತ್ತ ನಾಯಕರೆಲ್ಲ ಅರವತ್ತುನಾಲ್ಕು ಕಲೆಗಳನ್ನು ಅರಿತವರಾಗಿರುತ್ತಿದ್ದರು. ಭರತನಾಟ್ಯ ಶಾಸ್ತ್ರದಲ್ಲಿ ವೈಶಿಕ ನಾಯಕನ ಲಕ್ಷಣವನ್ನು–

ವಿಶೇಷಯೇತ್‌ಕಲಾಃ ಸರ್ವಾ ಯಸ್ಮಾತ್ ತಸ್ಮಾತ್ತು ವೈಶಿಕಃ
ಯೋಪಿ ಸರ್ವಕಲೋಪೇತಃ ಸರ್ವ ಶಿಲ್ಪ ವಿಚಕ್ಷಣಃ
ಸ್ತ್ರೀಚಿತ್ತಗ್ರಹಣಾಭಿಜ್ಞಃ ವೈಶಿಕಃ ಸಭವೇತ್ ಪುಮಾನ್

ಎಂದು ವಿವರಿಸಿದೆ. ಕಾಮಶಾಸ್ತ್ರಜ್ಞನಾದ ವಾತ್ಸ್ಯಾಯನನು ಸಕಲ ವಿದ್ಯಾ ಪಾರಂಗತಳಾದ ವಧು, ಸುಸಂಸ್ಕೃತ ನಾಗರಿಕರೆಂದರೆ ಅರವತ್ತುನಾಲ್ಕು ಕಲೆ ಗಳನ್ನೂ ಬಲ್ಲವರು ಎಂದಿದ್ದಾನೆ. ಕನ್ನಡ ನಾಡಿನ ಅನೇಕ ರಾಜರು 'ಚವುಷಷ್ಟಿ ಕಳಾನ್ವಿತ'ರಾಗಿದ್ದುದನ್ನು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ ಎಂದು ಡಾ॥ ಚಿದಾನಂದ ಮೂರ್ತಿ ಅವರು ತಿಳಿಸಿದ್ದಾರೆ.

64 ಕಲೆಗಳ ವ್ಯಾಪ್ತಿಯನ್ನು ಪರಿಶೀಲಿಸಿದಾಗ ಆ ಕಾಲದ ಎಲ್ಲ ರಾಜರು, ಮಂತ್ರಿ, ಪುರೋಹಿತ, ನಾಗರೀರೂ "ಚತುಷಷ್ಟ್ಯಂಗ ತತ್ವಜ್ಞ" ರಾಗಿರುತ್ತಿದ್ದರು ಎಂಬ ವಿವರಣೆ ಸ್ವಲ್ಪ ಉತ್ಪ್ರೇಕ್ಷಿತ ಎನಿಸದಿರದು. ಈ 64 ಕಲೆಗಳಲ್ಲಿ ಕೆಲವನ್ನಂತೂ ಹಲವು ವರ್ಷ ಕಲಿತು, ಹಲವಾರು ವರ್ಷ ಸಾಧನೆ ಮಾಡಿದರೂ ಅವುಗಳಲ್ಲಿ ಪರಿಣತರಾಗುವುದು ಸುಲಭವಲ್ಲ. ಹೀಗಿರುವಾಗ 64 ಕಲೆಗಳಲ್ಲಿ ಪರಿಣತಿ-ಎನ್ನುವುದು ಕೇವಲ ಪ್ರಶಸ್ತಿಯಾಗಿ ಬಳಸುತ್ತಿದ್ದ ಹೇಳಿಕೆ ಇರಬಹುದು. 64 ಎಂಬುದು ಸಾಂಕೇತಿಕವಾಗಿ ಒಂದು, ಎರಡು ಕಲೆಗಳಲ್ಲಿ ಪರಿಣತರಾದವರು ಉಳಿದವುಗಳಲ್ಲಿ ಪ್ರಾಥಮಿಕ ಜ್ಞಾನವನ್ನು ಪಡೆದಿರುತ್ತಿದ್ದರೆಂಬುದು ಬಹುಶಃ ವಾಸ್ತವ ಅಂಶವಿರಬೇಕು.

ಸಾಹಿತ್ಯಕೃತಿಗಳಲ್ಲಿ, ಶಾಸನಗಳಲ್ಲಿ ಕೇವಲ ರಾಜ, ಮಹಾರಾಜರನ್ನು, ಅವತಾರಪುರುಷರನ್ನು ಮಾತ್ರ ಕುರಿತು ಹೇಳಿದೆ ಎಂದಮಾತ್ರಕ್ಕೆ ಶ್ರೀಸಾಮಾನ್ಯ ರಿಗೆ ಈ ಕಲೆಗಳ ಬಗೆಗೆ ಆಸಕ್ತಿ ಇರಲಿಲ್ಲ ಎಂದಾಗಲಿ, ಜನಸಾಮಾನ್ಯರು ಇವು ಗಳನ್ನು ಕಲಿಯುತ್ತಿರಲಿಲ್ಲ ಎಂದಾಗಲಿ ತಿಳಿಯಲಾಗದು. ಅವಕಾಶ, ಅಗತ್ಯ ಬಿಡುವು ಇದ್ದವರು 64 ಕಲೆಗಳನ್ನು ಮೈಗೂಡಿಸಿಕೊಂಡರೆ, ನಿತ್ಯದ ಬದುಕೇ ಸಮಸ್ಯೆಯಾಗಿ ಉಳ್ಳ ಸಾಮಾನ್ಯ ಜನ ಒಂದು-ಎರಡು ಕುಶಲಕಲೆಗಳನ್ನು ಕಲಿತು, ಅವುಗಳನ್ನೇ ತಮ್ಮ ಜೀವನಕ್ಕೆ ಆಧಾರವಾದ ಉದ್ಯೋಗವಾಗಿ ಬಳಸಿಕೊಳ್ಳು ತ್ತಿದ್ದರು. ಕಮ್ಮಾರ, ಬಡಗಿ, ಅಕ್ಕಸಾಲೆ, ಗ್ರಾಮವೈದ್ಯ, ಕುಂಬಾರ ಮೊದಲಾದ ವೃತ್ತಿನಿರತರ ಕಸಬುಗಳೆಲ್ಲವೂ ಕುಶಲಕಲೆಗಳ ವ್ಯಾಪ್ತಿಯಲ್ಲಿಯೇ ಬರುತ್ತವೆ ಎಂಬುದು ಗಮನಿಸಬೇಕಾದ ಅಂಶ. ಮರಗೆಲಸಗಾರ, ವಾಸ್ತು ಶಿಲ್ಪಿಗಳಂತು ವೇದಕಾಲೀನ ಸಮಾಜದಲ್ಲಿ ಬಹುಮುಖ್ಯರಾಗಿದ್ದರು. ಗ್ರಾಮಾಡಳಿತ ವ್ಯವಸ್ಥೆಯಲ್ಲಿ ಇವರಿಗೆ ಮುಖ್ಯ ಸ್ಥಾನವಿತ್ತು. ಹೊಸ ಗ್ರಾಮಾಧಿಕಾರಿ ಅಧಿಕಾರ ಸ್ವೀಕರಿಸಿದಾಗ ಬಡಗಿ, ಕಮ್ಮಾರರ ಮನೆಗಳಿಗೇ ಹೋಗಿ ಗೌರವ ಸಲ್ಲಿಸಿ ಬರಬೇಕಾಗಿತ್ತು. ವ್ಯವಸಾಯವೇ ಪ್ರಧಾನ ವೃತ್ತಿಯೂ ವ್ಯವಸಾಯೋಪಕರಣಗಳ ನಿರ್ಮಾಣ ಕೈ-ಕಸುಬಾಗಿದ್ದುದೂ ಸಹ ಈ ಬಗೆಯ ವಿಶೇಷ ಮನ್ನಣೆಗೆ ಕಾರಣವಿದ್ದಿರಬೇಕು.

ಕಾಲಕ್ರಮದಲ್ಲಿ ಇಂಥ ವೃತ್ತಿನಿರತರಿಗೆ ಸಮಾಜದಲ್ಲಿ ಸ್ಥಾನ ಇಳಿಮುಖ ವಾಯಿತು. ಇವರು ಅಸ್ಪೃಶ್ಯರಿಂದ ಜೀವಿಸುವ ಜನ ಎಂಬ ಭಾವನೆ ಬೆಳೆದು ಉನ್ನತ ವರ್ಗದವರು ಈ ವೃತ್ತಿಗಳನ್ನು ಕಲಿಯುವುದನ್ನು ಕೈಬಿಟ್ಟರು.

ಮರಗೆಲಸ, ಕಮ್ಮಾರಿಕೆ, ವೈದ್ಯವೃತ್ತಿ ಮೊದಲಾದವು ಶೂದ್ರವೃತ್ತಿಗಳೆಂಬ ದುರ್ಭಾವನೆ ಬೆಳೆಯಿತು. ಇದರಿಂದ ಗ್ರಾಮ ಕಲೆಗಳಲ್ಲಿ ಪರಿಣತೆಯೂ ಕಡಿಮೆ ಆಗುತ್ತ ಬಂತು.

ವೇದಾಧ್ಯಯನಾದಿ ಸಾಹಿತಿಕವಿದ್ಯೆ ಕಲಿಸಲು ಗುರುಕುಲಗಳಿದ್ದ ಹಾಗೆ ಈ ಕಲೆಗಳನ್ನು ಕಲಿಸಲು ಏನು ವ್ಯವಸ್ಥೆ ಇತ್ತು ಎಂಬುದು ಪರಿಶೀಲನಾರ್ಹ ಅಂಶ. ಸಾಮಾನ್ಯವಾಗಿ ಗ್ರಾಮಕಸುಬುಗಳು ವಂಶಪಾರಂಪರ್ಯವಾಗಿ ತಂದೆಯಿಂದ ಮಗನಿಗೆ ಬರುತ್ತಿದ್ದುದೇ ರೂಢಿ. ಚಿಕ್ಕಮಗುವಾಗಿದ್ದಾಗಿನಿಂದ ಮನೆಯಲ್ಲಿ ತಂದೆಯ ಉದ್ಯೋಗವನ್ನು ಮಗ ಗಮನವಿಟ್ಟು ನೋಡುತ್ತಿದ್ದ. ವಯಸ್ಸಾದಂತೆ ತಂದೆಗೆ ಸಹಾಯಕನಾಗಿ ಸಣ್ಣ ಪುಟ್ಟ ಕೆಲಸಗಳನ್ನು ಮಾಡಿ ಕಲಿಯುತ್ತಿದ್ದ. ತಂದೆಯೇ ಗುರುವಾಗದಿದ್ದ ಸಂದರ್ಭಗಳಲ್ಲಿ ಪರಿಣತ ಕಸುಬುದಾರರಲ್ಲಿ ಶಿಷ್ಯರಾಗಿದ್ದುಕೊಂಡು ಕುಶಲಕಲೆಗಳನ್ನು ಕಲಿಯಲಾಗುತ್ತಿತ್ತು. ಸಾಮಾನ್ಯವಾಗಿ ಇಂಥ ಸಂದರ್ಭಗಳಲ್ಲಿ ಶಿಷ್ಯನಿಗೆ ಗುರುವಿನ ಮನೆಯಲ್ಲೇ ಊಟ, ವಸತಿಗಳು ದೊರೆಯುತ್ತಿದ್ದವು. ಈ ಕಾರಣದಿಂದ ಆಗುವ ವೆಚ್ಚ ಮತ್ತು ಗುರುವಿಗೆ ನೀಡಬೇಕಾದ ಶುಲ್ಕಕ್ಕೆ ಪ್ರತಿಯಾಗಿ ಶಿಷ್ಯರಾದವರು ಕಸುಬನ್ನು ಚೆನ್ನಾಗಿ ಕಲಿತಮೇಲೆ ಕೆಲಕಾಲ ಗುರುವಿನ ಬಳಿಯೇ ನಿಂತು, ಸಹಾಯಕರಾಗಿ ದುಡಿದು ಋಣಮುಕ್ತರಾಗುತ್ತಿದ್ದರು.

### ಉದಾಹರಣೆ

ಡಾ॥ ಆನಂದಕುಮಾರಸ್ವಾಮಿ ಅವರು ಭಾರತದಲ್ಲಿ ಕಲಾ ಶಿಕ್ಷಣ ಹೇಗೆ ನಡೆಯುತ್ತಿತ್ತು ಎಂಬುದನ್ನು ವಿವರಿಸುತ್ತಾ ಚಿತ್ರಕಲೆಯ ಶಿಕ್ಷಣದ ಉದಾಹರಣೆ ನೀಡಿದ್ದಾರೆ.[1]

"ವಿದ್ಯಾರ್ಥಿಗೆ ಮೊದಲು ರೇಖೆ ಮತ್ತು ವಕ್ರರೇಖೆಗಳನ್ನು ಕಣ್ಣಳತೆ, ಕೈಯಳತೆ ಮತ್ತು ಮಾದರಿಗಳನ್ನು ನೋಡಿದ ನೆನಪಿನಿಂದ ಎಳೆಯುವುದನ್ನು ಅಭ್ಯಾಸಮಾಡಿಸಲಾಗುತ್ತಿತ್ತು. ಸಾಂಪ್ರದಾಯಕ ಅಲಂಕರಣ ಮತ್ತು ಅಲಂಕಾರಿಕ ಚಿತ್ರಸಂಕೇತಗಳ ಚಿತ್ರಣ ಶಿಕ್ಷಣದ ಎರಡನೆಯ ಹಂತ. ಪೌರಾಣಿಕ ಪಾತ್ರಗಳು ಕುಬ್ಜರಾದ ಮಾನವರನ್ನು ಚಿತ್ರಿಸುವುದು ಬಂದಮೇಲೆ, ಗುರುವು ತಾನು ಕೆಲಸ ಮಾಡುತ್ತಿದ್ದ ದೇವಾಲಯಕ್ಕೆ ತನ್ನ ಕೆಲಸಕ್ಕೆ ನೆರವಾಗಲು

1. The Indian Craftsman, Pages 83–90

ಕರೆದೊಯ್ಯುತ್ತಿದ್ದ. ಅಲ್ಲಿ ಬಣ್ಣಗಳನ್ನು ಅರೆಯುವುದು. ಚಿತ್ರ ರಚನೆಯ ಪ್ರದೇಶಕ್ಕೆ ಬಣ್ಣಬಳಿಯುವುದನ್ನು ಶಿಷ್ಯ ಮೊದಲು ಮಾಡುತ್ತಿದ್ದ. ಅನಂತರ ಮೂಲವರ್ಣಗಳನ್ನು ಬಳಿಯುವುದು ಮತ್ತು ಗುರುವು ರಚಿಸಿದ ರೇಖಾ ಚಿತ್ರಗಳಿಗೆ ಬಣ್ಣಹಾಕುವುದನ್ನು ಕಲಿಸಲಾಗುತ್ತಿತ್ತು. ಶಿಷ್ಯನ ಶ್ರದ್ಧೆ. ಪರಿಶ್ರಮ ಮತ್ತು ಪರ್ಹತೆಗಳನ್ನು ಕಂಡು ತೃಪ್ತನಾದ ಬಳಿಕ ಗುರುವು ಉದ್ಯಮದ ರಹಸ್ಯಗಳನ್ನು ಬೋಧಿಸುತ್ತಿದ್ದನು. ಈ ಎಲ್ಲ ಶಿಕ್ಷಣವೂ ವಾಸ್ತವ ಜೀವನ ಮತ್ತು ಸಮಸ್ಯೆಗಳಿಗೆ ಹೊಂದಿಕೊಂಡಿರುತ್ತಿತ್ತು."

ಆ ಕಾಲದಲ್ಲಿ ಗೃಹಕೈಗಾರಿಕೆ ಮತ್ತು ಕೈಕಸುಬುಗಳಲ್ಲಿ ಪರಿಣತಿ ಪಡೆದ ವರಿಗೆ ವಿಶೇಷ ಗೌರವವಿತ್ತು. ಮೈ ಬಗ್ಗಿಸಿ ದುಡಿಯುವುದು ಘನತೆಗೆ ಕುಂದು ಎಂಬ ಭಾವನೆ ಇದ್ದಿರಲಿಲ್ಲ. ಜಾತಿಗೂ, ಉದ್ಯೋಗಕ್ಕೂ ಗಂಟುಹಾಕುವ ಪದ್ಧತಿ ಇರಲಿಲ್ಲ. ಸಾಮಾನ್ಯ ಶಿಕ್ಷಣದ ಜೊತೆಗೆ ಯಾವುದಾದರೂ ಒಂದೆರಡು ಉಪಯುಕ್ತ ಕೈಕಸುಬುಗಳನ್ನು ಕಲಿಸುವುದು ಶಿಕ್ಷಣದ ಅಂಗವಾಗಿತ್ತು. ವೇದಾಧ್ಯಯನ, ವೈದಿಕವೃತ್ತಿ, ಶಿಕ್ಷಣದಂತಹ ಉದ್ಯಮಗಳಲ್ಲಿ ನಿರತರಾಗಿ ರುತ್ತಿದ್ದ ಬ್ರಾಹ್ಮಣರು ಸಹ ಶಿಲ್ಪ, ಲೋಹಕಲೆ, ಶಸ್ತ್ರಾಸ್ತ್ರ ಪ್ರಯೋಗ, ವೈದ್ಯ ಮೊದಲಾದ ಉಪಯುಕ್ತ ವಿದ್ಯೆಗಳನ್ನೂ ಕಲಿತು ಜನಜೀವನದಲ್ಲಿ ಬೆರೆತು ಬಾಳುತ್ತಿದರು. ಗುಪ್ತರ ಕಾಲದಿಂದೀಚೆಗಷ್ಟೆ ಕೈಕಸುಬು ಕಲಿಯುವುದು ಮತ್ತು ಕಾಯಕಷ್ಟದ ವೃತ್ತಿಗಳಲ್ಲಿ ನಿರತರಾಗುವುದು ಘನತೆಗೆ ಕುಂದು ಎಂಬ ಭಾವನೆ ಬೆಳೆಯಿತು. ಬುದ್ಧಿ ಜೀವಿಗಳು ಲಲಿತಕಲೆ ಮತ್ತು ಕುಶಲಕಲೆಗಳನ್ನು ಕಲಿತವರು ತಮ್ಮನ್ನು ಆಶ್ರಯಿಸಿ ಬದುಕುವ ಜನ ಎಂದು ಶ್ರೀಮಂತರು ಭಾವಿಸತೊಡಗಿದಾಗ ಈ ಕಲೆಗಳನ್ನು ಕಲಿಯುವ ಉತ್ಸಾಹ ಇಲ್ಲವಾಯಿತು.

ಆನಂದವೇ ಬ್ರಹ್ಮ; ಈಶ್ವರನು ರಸಸ್ವರೂಪಿ, ಆದ್ದರಿಂದ ರಸಾ ಸ್ವಾದನೆಯಿಂದ ಸುಖ ಎಂಬುದಾಗಿ ಬೋಧಿಸಿ, ಅನುಷ್ಠಾನದಲ್ಲಿ ತಂದು ಕೊಂಡಿದ್ದ ಪ್ರಾಚೀನ ಭಾರತೀಯರ ಕಲಾಭಿಮಾನ ಅಪೂರ್ವವಾದುದು. ಸುಖಿ, ಸಂತೃಪ್ತ ಭೋಗಜೀವನ ಮೋಕ್ಷಸಾಧನೆಗೆ ಅಡ್ಡಿಯಲ್ಲ ಎಂದು ಅವರು ಭಾವಿಸಿದ್ದರು. ಎಂದೇ ಅವರು ಕಲೆಗಳಿಗೆ ವಿಶೇಷ ಮಾನ್ಯತೆ ನೀಡಿದ್ದರು. ಅಷ್ಟೇ ಅಲ್ಲ ಜೀವನೋಪಭೋಗಕ್ಕೆ ಸಾಧಕವಾದ ಎಲ್ಲ ವಿದ್ಯೆಗಳನ್ನೂ ಕಲೆಗಳೆಂದೇ ಭಾವಿಸಿದ್ದರು.

ಪ್ರಸ್ತುತ ಪುಸ್ತಕದಲ್ಲಿ ವಾತ್ಸ್ಯಾಯನ ಕಾಮಸೂತ್ರದಲ್ಲಿ ವಿವರಿಸಿರುವ ಕಲೆಗಳನ್ನು ಮಾತ್ರ ವಿವರಿಸಲಾಗಿದೆ. ಈ ಕಲೆಗಳಲ್ಲಿ ಅನೇಕವು ಅಸ್ಪಷ್ಟವಾಗಿ ರುವುದೂ, ಹಲವು ಪಂಡಿತರು ಹಲವು ಬಗೆಯಾಗಿ ಅರ್ಥಮಾಡಿರುವುದೂ ಉಂಟು. ನನಗೆ ಲಭ್ಯವಾದ ಹಲವಾರು ಆಧಾರಗಳನ್ನು ಪರಿಶೀಲಿಸಿ ಆದಷ್ಟು ಪರಿಶ್ರಮದಿಂದ ಈ ಚಿಕ್ಕ ಪುಸ್ತಕವನ್ನು ಸಿದ್ಧಗೊಳಿಸಿದ್ದೇನೆ. ಆದರೂ ಇದರಲ್ಲಿ ಲೋಪದೋಷಗಳು ಇಲ್ಲ ಎಂಬ ನಂಬಿಕೆ ಏನೂ ಇಲ್ಲ. ಓದುಗರು ಅಂಥವುಗಳನ್ನು ತಿಳಿಸಿದರೆ ತಿದ್ದಿಕೊಳ್ಳುತ್ತೇನೆ.

ಚಿಕ್ಕದಾದ ಕಲಾ ವಿಶ್ವಕೋಶದಂಥ ಈ ಪುಸ್ತಕ ಕನ್ನಡದಲ್ಲಿ ಇದೇ ಮೊದಲನೆಯದು. ಸಂಗೀತ, ಶಿಲ್ಪ, ನಾಟ್ಯ ಮೊದಲಾದ ಕಲೆಗಳ ಬಗ್ಗೆ ಇತ್ತೀಚೆಗೆ ಬೆಳೆಯುತ್ತಿರುವ ಆಸಕ್ತಿಯೇ ಈ ಪುಸ್ತಕ ರಚನೆಗೆ ಪ್ರಚೋದನೆ. ಈ ಕಲೆಗಳೊಂದೊಂದನ್ನು ವಿಶದವಾಗಿ ಬೋಧಿಸುವ ಶಾಸ್ತ್ರಗ್ರಂಥಗಳು ಕನ್ನಡದಲ್ಲಿ ಪ್ರಕಟವಾಗುತ್ತಿರುವಾಗ ಕೈಪಿಡಿಯಂಥ ಈ ಚಿಕ್ಕ ಪುಸ್ತಕವನ್ನೂ ಓದುಗರು ವಿಶ್ವಾಸದಿಂದ ಸ್ವಾಗತಿಸಿಯಾರು ಎಂದು ನಂಬುತ್ತೇನೆ. ಕನ್ನಡಜನ ಕಲಾವಿಲಾಸಿಗಳೂ, ಸೌಂದರ್ಯೋಪಾಸಕರೂ ಆಗಲು ಈ ಪುಸ್ತಕದಿಂದ ಕಿಂಚಿತ್ ಸಹಾಯಕವಾದರೆ ಕಲೆಗಳ ಬಗೆಗೆ ಹೆಚ್ಚು ಹೆಚ್ಚಾಗಿ ಅರಿತುಕೊಳ್ಳುವ ಆಸೆ ಮೂಡಿಸಿದರೆ ನನ್ನ ಪ್ರಯತ್ನ ಸಾರ್ಥಕವಾಯಿತೆಂದು ನಂಬುತ್ತೇನೆ.

# 64

# ಕಲೆಗಳು

## 1. ಸಂಗೀತ

ಕಾಮಶಾಸ್ತ್ರದ ವ್ಯಾಖ್ಯಾನಕಾರನಾದ ಯಶೋಧರನು – "ಸ್ವರ ಪ್ರಧಾನವೂ ಲಯಪ್ರಧಾನವೂ ಚೇತನದ ಅವಧಾನ ಪ್ರಧಾನವೂ ಆದ ಗಾನ" ಎಂದು 'ಗೀತ'ಕ್ಕೆ ವಿವರಣೆ ನೀಡಿದ್ದಾನೆ. ಇದೇ ಸಂಗೀತವೆಂದು ಸುಪ್ರಸಿದ್ಧ ವಾಗಿರುವ ಕಲೆ. ಸಂಗೀತ ಸಾಮವೇದದಿಂದ ಹುಟ್ಟಿದ್ದು ಎಂಬುದು ನಮ್ಮ ನಂಬಿಕೆ. ಇದನ್ನು ಗಾಂಧರ್ವ ವಿದ್ಯೆಗಳಲ್ಲಿ ಒಂದು ಎಂದು ಪರಿಗಣಿಸಲಾಗಿದೆ. ನಾರದನು ಸನತ್ಕುಮಾರನನ್ನು ಪರಮಾರ್ಥತತ್ತ್ವೋಪದೇಶವನ್ನು ನೀಡುವಂತೆ ಪ್ರಾರ್ಥಿಸಿದಾಗ ತಾನು ಸಂಗೀತಾದಿ 'ದೇವಜನ ವಿದ್ಯೆ'ಗಳನ್ನು ಸಹ ಅರಿತಿರು ವುದಾಗಿ ವಿನಂತಿಸಿಕೊಳ್ಳುತ್ತಾನೆ – ಎಂದು ಛಾಂದೋಗ್ಯೋಪನಿಷತ್ತಿನಲ್ಲಿ ಹೇಳಿದೆ.

ಭಾರತೀಯ ಸಂಗೀತ ವೈದಿಕ ಮತ್ತು ಜಾನಪದ ಸಂಪ್ರದಾಯಗಳ ಮೇಳವಾಗಿದೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ವೇದಾಧ್ಯಯನದ ಪದ, ಕ್ರಮ, ಘನ, ಜಟಾಪಾಠಗಳೂ, ಉದಾತ್ತ ಅನುದಾತ್ತ ಪ್ರಚಯ ಸ್ವರಿತಗಳೂ ಸಂಗೀತಕ್ಕೆ ಮೂಲ. ಸಾಮಗಾನದ ಕ್ರುಷ್ಟ, ಪ್ರಥಮ ದ್ವಿತೀಯ, ತೃತೀಯ, ಚತುರ್ಥ, ಮಂದ್ರ ಮತ್ತು ಅತಿಸ್ವಾರಗಳೇ ಪಂಚಮ, ಮಧ್ಯಮ, ಗಾಂಧಾರ, ಋಷಭ, ಷಡ್ಜ, ಧೈವತ ಮತ್ತು ನಿಷಾದ ಸ್ವರ ಗಳಾದವು. ಸ್ವರದಿಂದ ರಾಗಗಳೂ, ಲಯದಿಂದ ತಾಳಗಳೂ, ವರ್ಣದಿಂದ

ಕೃತಿಗಳೂ ಹುಟ್ಟಿದವು. ಭಾರತದಲ್ಲಿ ಉತ್ತರಾದಿ (ಹಿಂದೂಸ್ತಾನಿ) ಕರ್ನಾಟ
(ದಕ್ಷಿಣಾದಿ) ಎಂಬ ಎರಡು ಸಂಗೀತ ಪದ್ಧತಿಗಳುಂಟು. ಈ ಒಂದೊಂದು
ಪದ್ಧತಿಗೂ ವಿಶಿಷ್ಟವಾದ ತಾಳಗಳೂ, ರಾಗಗಳೂ ಬೇರೆ ಬೇರೆಯಾಗಿವೆ.

ನಾರದೀಯ ಪುರಾಣದಲ್ಲಿ ಸಂಗೀತ ಶಾಸ್ತ್ರವನ್ನು ಕುರಿತು ಈ ವಿವ
ಗಳಿವೆ: ಷಡ್ಜವು ದೇವತೆಗಳನ್ನೂ, ಋಷಭವು ಋಷಿಗಳನ್ನೂ ಗಾಂಧಾರವು
ಪಿತೃಗಳನ್ನೂ, ಮಧ್ಯಮವು ಗಂಧರ್ವರನ್ನೂ, ಪಂಚಮವು ದೇವ ಪಿತೃ
ಋಷಿಗಳನ್ನೂ, ನಿಷಾದವು ಯಕ್ಷರನ್ನೂ, ಧೈವತವು ಪ್ರಾಣಿ ಸಾಮಾನ್ಯವನ್ನೂ
ಸಂತೋಷಪಡಿಸುತ್ತವೆ.

ಗಾನದ ಗುಣವೃತ್ತಿ ಹತ್ತು ವಿಧ: ರಕ್ತ, ಪೂರ್ಣ, ಅಲಂಕೃತ
ಪ್ರಸನ್ನ, ವ್ಯಕ್ತ, ವಿಕ್ರುಷ್ಟ, ಶ್ಲಕ್ಷ್ಣ, ಸಮ, ಸುಕುಮಾರ ಮತ್ತು ಮಧುರ
ಎಂದು.

1. ವೇಣು, ವೀಣೆ ಮತ್ತು ಪುರುಷ ಧ್ವನಿಗಳ ಏಕೀಭಾವದಿಂದ ಉಂಟಾಗುವ ರಂಜನೆಗೆ ರಕ್ತ ಎಂದು ಹೆಸರು.

2. ಸ್ವರ–ಶ್ರುತಿಗಳ ಸಂಯೋಜನೆಯಿಂದ ಛಂದಸ್ಸಿನ ಪಾದಾಕ್ಷರಗಳ ಸ್ಫುಟ ಉಚ್ಚಾರಣೆ ಪೂರ್ಣ.

3. ಮಧ್ಯಮ ಸ್ಥಾಯಿಯಲ್ಲಿದ್ದ ಧ್ವನಿಯನ್ನು ಮಂದರಕ್ಕೆ ತರುವುದು ಅಲಂಕೃತ ಎನಿಸುವುದು.

4. ಗದ್ಗದ ಮತ್ತು ಶಂಕಾಸ್ಪದವಲ್ಲದ ಸ್ವರವೇ ಪ್ರಸನ್ನ.

5. ಪದ, ಪದಾರ್ಥ, ಪ್ರಕೃತಿ, ವಿಕಾರ, ಆಗಮ, ಕೃತ್ತು, ತದ್ಧಿತ ಸಮಾಸ, ಧಾತು, ನಿಪಾತ, ಉಪಸರ್ಗ, ಸ್ವರ, ತಿಜಂತ, ವೃತ್ತಿ ವಾರ್ತಿಕ, ವಿಭಕ್ತ್ಯರ್ಥ ಮತ್ತು ವಚನಗಳನ್ನು ಚೆನ್ನಾಗಿ ಉಪಪಾದಿಸುವುದು ವ್ಯಕ್ತ.

6. ಪದಾಕ್ಷರಗಳನ್ನು ವ್ಯಕ್ತವಾಗಿ, ಗಟ್ಟಿಯಾಗಿ ಹೇಳುವುದಕ್ಕೆ ವಿಕೃಷ್ಟ ಎಂದು ಹೆಸರು.

7. ಅತಿಶೀಘ್ರವಾಗಿಯೂ ಅತಿ ವಿಳಂಬವಾಗಿಯೂ ಇಲ್ಲದೆ ಸಮವಾಗಿ ಸ್ಥಾಯಿತ್ರಯ, ಕಾಲತ್ರಯಗಳಿಗೆ ಅನುಸಾರವಾದ ವಿತರಣೆಗೆ ಶ್ಲಕ್ಷ್ಣ ಎನ್ನುವರು.

8. ವ್ಯವಧಾನ ಸ್ಥಾನಗಳಲ್ಲಿ ಸಮವಾದ ಉಚ್ಚಾರ ಸಮ ಎನಿಸುವುದು.

9. ಮೃದುವಾದ, ಸ್ಫುಟವಲ್ಲದ ಪದ್ಯ, ವರ್ಣ, ಸ್ವರಗಳನ್ನು ಗಂಟಲಿನಲ್ಲಿ ಬಲಾತ್ಕಾರವಾಗಿ ಹೊರಡಿಸುವುದಕ್ಕೆ ಸುಕುಮಾರ ಎಂದು ಹೆಸರು.

10. ಸ್ವಾಭಾವಿಕವಾದ ಹಸನ್ಮುಖದಿಂದ ಪ್ರಕಟವಾಗುವ ಲಲಿತ ಪದಾಕ್ಷರಯುಕ್ತವಾದ ಗಾನಕ್ಕೆ ಮಧುರ ಎಂದು ಹೆಸರು.[1]

ಪಶು–ಶಿಶುಗಳಾದಿಯಾಗಿ ಸರ್ವರನ್ನೂ ಮೋಹಿಸುವ ಶಕ್ತಿಯುಳ್ಳ ಸಂಗೀತ ಒಂದು ವಿಶಿಷ್ಟ ಶಾಸ್ತ್ರವೇ ಆಗಿದೆ. ಈ ಶಾಸ್ತ್ರವನ್ನು ವಿವರಿಸುವ ಅನೇಕ ಗ್ರಂಥಗಳು ರಚಿತವಾಗಿವೆ. ಶಾರ್ಙ್ಗದೇವನ 'ಸಂಗೀತರತ್ನಾಕರ', ಸೋಮೇಶ್ವರನ 'ಅಭಿಲಷಿತಾರ್ಥ ಚಿಂತಾಮಣಿ', ಮಮ್ಮಟನ 'ಸಂಗೀತ ರತ್ನಮಾಲ' ಮುಂತಾದುವು ಸುಪ್ರಸಿದ್ಧವಾಗಿವೆ.

ಆಚಾರ್ಯರು ಸಮಗಾನವನ್ನೂ, ಪಂಡಿತರು ವ್ಯಕ್ತಗಾನವನ್ನೂ, ಹೆಂಗಸರು ಮಧುರಗಾನವನ್ನೂ, ಇತರರು ವಿಕೃಷ್ಟಗಾನವನ್ನೂ ಮೆಚ್ಚುತ್ತಾರೆ:

ಆಚಾರ್ಯಾಃ ಸಮಮಿಚ್ಛಂತಿ ವ್ಯಕ್ತಮಿಚ್ಛಂತಿ ಪಂಡಿತಾಃ ।
ಸ್ತ್ರೀಯೋ ಮಧುರ ಮಿಚ್ಛಂತಿ, ವಿಕೃಷ್ಟಮಿತರೆ ಜನಾಃ ॥

ನಾರದೀಯ ಪುರಾಣ ಅ. 50

ಶ್ರುತಿ, ಸ್ವರ, ತಾಳಬದ್ಧವಲ್ಲದ ಸಂಗೀತದಿಂದ ರಾಗರಾಗಿಣಿಯರ ರೂಪ ವಿಕೃತವಾಗುತ್ತದೆ ಎಂಬ ನಂಬಿಕೆಯುಂಟು. ಈ ಕುರಿತು ಬ್ರಹ್ಮ ಪುರಾಣದಲ್ಲಿ ಒಂದು ಕಥೆಯೂ ಇದೆ.

---

1 ನಾರದೀಯ ಪುರಾಣ, ಅ. 50

## 2. ವಾದ್ಯಗಳು

ಬಾಯಿ ಹಾಡುಗಾರಿಕೆಗೆ ಪೋಷಕವಾಗಿ ಮತ್ತು ತನಿಯಾಗಿ ವಾದ್ಯಗಳನ್ನು ನುಡಿಸುವ ಕಲೆ ಚತುಃಷಷ್ಟಿ ಕಲೆಗಳಲ್ಲಿ ಎರಡನೆಯದು. ಇದು ಸಂಗೀತದಷ್ಟೆ ಪ್ರಾಚೀನವಾದುದು.ವೀಣಾ ವೇಣು ಮೃದಂಗಗಳು ವಾದ್ಯತ್ರಯಗಳೆಂದು ವೇದಗಳ ಕಾಲದಲ್ಲಿಯೇ ಪ್ರಚಲಿತವಿದ್ದವು.

ಭಾರತದಲ್ಲಿರುವಷ್ಟು ವೈವಿಧ್ಯಪೂರ್ಣವೂ, ಅಸಂಖ್ಯಾತವೂ ಆದ ವಾದ್ಯ ಸಂಪತ್ತು ಬೇರೆ ಯಾವ ರಾಷ್ಟ್ರದಲ್ಲೂ ಇಲ್ಲ. ಅನಾದಿಕಾಲದಿಂದ ಬೆಳೆದು ಬಂದಿರುವ ಸರಿ ಸುಮಾರು 500ಕ್ಕೂ ಹೆಚ್ಚು ವಾದ್ಯಗಳು ನಮ್ಮಲ್ಲಿ ಉಂಟು. ಭಾರತೀಯ ವಾದ್ಯಗಳೆಲ್ಲವೂ ನುಡಿಸುವವನ ಚಾತುರ್ಯವನ್ನು ಅವಲಂಬಿಸಿವೆಯೇ ವಿನಾ ಯಾಂತ್ರಿಕವಲ್ಲ. ಕೀ-ಬೋರ್ಡ್ ಮಾದರಿಯ ಪಾಶ್ಚಾತ್ಯವಾದ್ಯಗಳಿಗೆ ನಮ್ಮಲ್ಲಿ ಅಷ್ಟಾಗಿ ಪುರಸ್ಕಾರವಿಲ್ಲದಿರುವುದು ಗಮನಾರ್ಹ ಅಂಶ.

ಉಪಯುಕ್ತತೆಯ ದೃಷ್ಟಿಯಿಂದ ಭಾರತೀಯ ವಾದ್ಯಗಳನ್ನು ಈ ರೀತಿ ವಿಂಗಡಿಸಬಹುದು :

1. ಮೇಳವಾದ್ಯಗಳು - ಇವುಗಳಲ್ಲಿ (ಅ) ಶ್ರುತಿವಾದ್ಯಗಳು : ತಂಬೂರಿ ಮುಂತಾದವು. (ಆ) ಲಯವಾದ್ಯಗಳು : ಮೃದಂಗ, ಘಟ, ಕಂಜರಿ ಇತ್ಯಾದಿ. (ಇ) ಸಂಗೀತವಾದ್ಯಗಳು : ವೀಣಾ, ಪಿಟೀಲು, ಸಿತಾರ್, ಕೊಳಲು. ನಾದಸ್ವರ, ಜಲತರಂಗ ಇತ್ಯಾದಿ.
2. ದೇವಾಲಯ ವಾದ್ಯಗಳು – ಕಹಳೆ, ತುತ್ತೂರಿ, ಮುಖವೀಣಾ, ಶಂಖ, ಘಂಟೆ, ನಗಾರಿ, ಜಾಗಟೆ ಇತ್ಯಾದಿ.
3. ರಣವಾದ್ಯಗಳು – ಭೇರಿ, ದುಂದುಭಿ, ಉರುಮೆ ಮುಂತಾದವು.
4. ಜಾನಪದ ವಾದ್ಯಗಳು – ಏಕನಾದ, ಕೊಂಬು, ತಮಟೆ, ಪಿಳ್ಳಂಗೋವಿ ಇತ್ಯಾದಿ.

ಶಾಸ್ತ್ರದೃಷ್ಟಿಯಿಂದ 1. ತಂತೀವಾದ್ಯಗಳು 2. ವಾಯುವಾದ್ಯಗಳು ಮತ್ತು 3. ತಾಳವಾದ್ಯಗಳು ಎಂದು ಸ್ಥೂಲವಾಗಿ ವಿಭಜಿಸಲಾಗಿದೆ.

ತಂತೀ ವಾದ್ಯಗಳನ್ನು ಸಂಸ್ಕೃತದಲ್ಲಿ ತತವಾದ್ಯಗಳು ಎಂದು ಕರೆಯುತ್ತಾರೆ. ಇವುಗಳಲ್ಲಿ ಪಿಟೀಲು, ಸಾರಂಗಿ, ದಿಲ್‌ರುಬಾ, ಬಾಲಸರಸ್ವತಿ ಎಂಬ ವಾದ್ಯಗಳನ್ನು ನುಡಿಸಲು 'ಕಮಾನ್' ಬಳಸಲಾಗುತ್ತದೆ. ವೀಣಾ, ಮಹಾನಾಟಕ ವೀಣಾ (ಗೋಟು ವಾದ್ಯ) ಸಿತಾರ್ ಮುಂತಾದವುಗಳನ್ನು ಬೆರಳುಗಳಿಂದ ಅಥವಾ ಬೆರಳಿಗೆ ತೊಡಿಸಿದ ತಂತಿಯ ಸಾಧನದಿಂದ ನುಡಿಸುವರು.

ವಾಯುವಾದ್ಯಗಳನ್ನು ಸುಷಿರ ಅಥವ ಮುಖವಾದ್ಯಗಳೆಂದು ಕರೆಯುತ್ತಾರೆ. ಕೊಳಲು, ಪಿಳ್ಳಂಗೋವಿ, ನಾದಸ್ವರ, ಮುಖವೀಣಾ ಇವುಗಳಲ್ಲಿ ಪ್ರಧಾನವಾದವು.

ತಾಳವಾದ್ಯಗಳಲ್ಲಿ ಆಘಾತವಾದ್ಯಗಳು ಅಥವ ಅವಾನದ್ಧ ವಾದ್ಯಗಳು ಮತ್ತು ಘನವಾದ್ಯಗಳು ಎಂದು ಎರಡು ವಿಧ. ಮೃದಂಗ, ತಬಲ, ಡೋಲು ಮೊದಲಾದವು ಮೊದಲನೆ ಜಾತಿಗೂ ಕಂಚಿನತಾಳ, ಘಂಟೆಯಂಥವು ಎರಡನೆ ಜಾತಿಗೂ ಸೇರಿವೆ.

ಭಾರತೀಯ ಜನಜೀವನದಲ್ಲಿ ಸಂಗೀತ ವಾದ್ಯಗಳಿಗೆ ಬಹುಮುಖ್ಯ ಸ್ಥಾನವಿತ್ತು. ಸಂಗೀತಕ್ಕಿಂತ ವಾದ್ಯಗಳಿಗೇ ವಿಶೇಷ ಪ್ರಾಧಾನ್ಯತೆ ಇದ್ದುದು ಕಂಡುಬರುತ್ತದೆ. ಪ್ರತಿಯೊಬ್ಬರ ಮನೆಗಳಲ್ಲೂ ನಿತ್ಯ ದೇವತಾಪೂಜೆ ಘಂಟಾನಾದದಿಂದಲೇ ಆರಂಭವಾಗುತ್ತದೆ. ವಿಶೇಷ ಪೂಜಾ ಸಮಾರಂಭಗಳಲ್ಲೂ, ವಿವಾಹಾದಿ ಮಂಗಳ ಕಾರ್ಯಗಳಲ್ಲೂ ಶಂಖ, ಜಾಗಟೆ, ತುತ್ತೂರಿ ನಾದ ಸ್ವರಗಳನ್ನು ಬಳಸುವುದು ಅಗತ್ಯ ಎಂಬ ಭಾವನೆ ಇತ್ತು. ರಾಜ ಮಹಾರಾಜರ ಅರಮನೆಗಳಲ್ಲಿ ದೇವಾಲಯ ಮಠಗಳಲ್ಲಿ ವಾದ್ಯಗೋಷ್ಠಿಗಳಿರುತ್ತಿದ್ದವು. ರಥೋತ್ಸವಾದಿಗಳಲ್ಲಿ ಪಂಚಮಹಾವಾದ್ಯ, ಸರ್ವವಾದ್ಯ ಸೇವೆಗಳು ಉತ್ಸವದ ಅಂಗವಾಗಿದ್ದವು. ಹೀಗೆ ಸಾಮಾಜಿಕ, ಧಾರ್ಮಿಕ ಜೀವನದ ಅಂಗವಾಗಿದ್ದ ವಾದ್ಯಗಳ ಬಗ್ಗೆ ಜ್ಞಾನ ನಾಗರಿಕ ಪ್ರಜೆಗೆ ಅಗತ್ಯವಾಗಿತ್ತು.

## 3. ನೃತ್ಯ

ಸಂಗೀತದಷ್ಟೆ ಪಂಡಿತ ಪಾಮರ ರಂಜಕವಾದುದು ನೃತ್ಯ ಕಲೆ. ಸಂಸ್ಕೃತದ ನಟ್ ಅಥವ ನೃತ್ ಎಂಬ ಧಾತುವಿನಿಂದ ಹುಟ್ಟಿದವೆಂದು ಹೇಳಲಾದ ಕುಣಿಯುವ ಮೂರು ವಿಧಗಳಲ್ಲಿ ನೃತ್ಯವೂ ಒಂದು. ರಸ, ಭಾವಪೂರ್ಣವಾದ ಅಭಿನಯವೇ ನೃತ್ಯ ಎಂದು ಲಾಕ್ಷಣಿಕರು ಹೇಳುತ್ತಾರೆ. ಸಾಮಾನ್ಯವಾಗಿ ಒಬ್ಬರೇ ಪ್ರದರ್ಶಿಸುವ ಕುಣಿತದ ಒಂದು ಬಗೆ ಇದು. ಇದರಲ್ಲಿ ನಾಟ್ಯ ಮತ್ತು ನೃತ್ತ ಭಾಗಗಳೆರಡೂ ಸಮ್ಮಿಳಿತವಾಗಿವೆ. ನೃತ್ತದಲ್ಲಿನ ಅಂಗವಿನ್ಯಾಸ ನಾಟ್ಯದಲ್ಲಿನ ಅಭಿನಯಗಳೆರಡೂ ಸೇರಿರುವುದೇ ನೃತ್ಯ. ಅಂಗವಿನ್ಯಾಸ ಎಂದರೆ ಅಂಗ, ಉಪಾಂಗ, ಮತ್ತು ಹಸ್ತಗಳ ವಿವಿಧ ಭಂಗಿಗಳ ಪ್ರದರ್ಶನ. ಅಭಿನಯ ಎಂದರೆ ಪ್ರೇಕ್ಷಕರಿಗೆ "ಅಭಿಮುಖವಾಗಿ" ಅನುಕರಣವನ್ನು "ಹೊಂದಿಸುವುದು" ಎಂದರ್ಥ. ಕೇವಲ ಅವಸ್ಥಾನುಕರಣವೇ ಅಭಿನಯವಲ್ಲ. ರಸಭಾವವ್ಯಂಜಕವಾದ ಚೇಷ್ಟಾವಿಶೇಷವೇ ಅಭಿನಯ ಎಂದು ಮಲ್ಲಿನಾಥನೆನ್ನುತ್ತಾನೆ. ನೃತ್ಯವನ್ನು ಸ್ಥೂಲವಾಗಿ ಈ ರೀತಿ ವಿವರಿಸಬಹುದು. ಸಂಗೀತ ತಾಳಗಳ ಹಿಮ್ಮೇಳವಿರಬೇಕು, ಆದರೆ ಕಥೆಯ ಅಗತ್ಯವಿಲ್ಲ. ಸಂತೋಷ, ವಿರಹ, ಮೊರೆ ದುಃಖ ಮುಂತಾದ ಭಾವಗಳನ್ನು ವ್ಯಕ್ತಪಡಿಸುವ ಹಾಡುಗಳನ್ನು ತಾವೇ ಹೇಳಿಕೊಂಡು ಅಥವ ಹಿನ್ನೆಲೆಯಲ್ಲಿ ಹಾಡುವುದನ್ನು ಅನುಸರಿಸಿ ಹಾವ, ಭಾವ, ವಿಲಾಸಗಳನ್ನು ಮುಖದಲ್ಲೂ ಹಸ್ತ ಭಂಗಿಗಳಿಂದಲೂ ವ್ಯಕ್ತಪಡಿಸಬೇಕು. ಇದರಲ್ಲಿ ತಾಂಡವ, ಲಾಸ್ಯ ಎಂಬ ಭೇದಗಳುಂಟು.

ಭಾರತದಲ್ಲಿ ಸದಿರ್‌ನೃತ್ಯ, ಕಥಕ್, ಕಥಕ್ಕಳಿ, ಮಣಿಪುರಿ, ಕೂಚಿಪುಡಿ, ಒಡಿಸ್ಸಿ ಎಂಬ ಹಲವು ಬಗೆಯ ಶಾಸ್ತ್ರೀಯ ನೃತ್ಯಪದ್ಧತಿಗಳೂ ಪ್ರತಿಯೊಂದು ಪ್ರದೇಶಕ್ಕೂ ವಿಶಿಷ್ಟವಾದ ಹಲವು ಬಗೆಯ ಜಾನಪದ ನೃತ್ಯ ಪದ್ಧತಿಗಳೂ ಉಂಟು. ಇವಲ್ಲದೆ ಕನ್ನಡ ನಾಡಿನ ಯಕ್ಷಗಾನ, ಕೇರಳದ ಅಟ್ಟಂ, ಅಸ್ಸಾಮಿನ ಸತ್ರಿಯ ನಾಟ್ಯ ನಾಟಕಗಳೂ ಜನಪ್ರಿಯವಾಗಿವೆ.

ಉತ್ತರ ಭಾರತದ ಕಥಕ್ ಸಂಪ್ರದಾಯದಲ್ಲಿನ ಗತ್‌ಭಾವ್, ಅರ್ಥ್‌ಭಾವ್‌ಗಳೂ ಮಣಿಪುರಿ ಸಂಪ್ರದಾಯದ ಖಂಬಾತೊಯಿಬಿ,

ಸಾಸ್‌ಗಳೂ ಭರತನಾಟ್ಯ (ಸದಿರ್ ನೃತ್ಯ) ದಲ್ಲಿನ ಪದ, ಶ್ಲೋಕ, ಶಬ್ದ, ಕಾವಳಿಗಳ ಅಭಿನಯವೂ ನೃತ್ಯವೆನಿಸುತ್ತದೆ.

ಹಿಂದೂಗಳ ನಂಬಿಕೆಯಂತೆ ಸಾಕ್ಷಾತ್ ಪರಶಿವನೇ ತಾಂಡವ ನೃತ್ಯದ ಸೃಷ್ಟಿಕರ್ತ. ಪಾರ್ವತಿಗೆ ಲಾಸ್ಯವನ್ನು ಬೋಧಿಸಿದವನೂ, ಬ್ರಹ್ಮನಿಗೆ ನಾಟ್ಯಶಾಸ್ತ್ರವನ್ನು ಕಲಿಸಿದವನೂ ನಟರಾಜನಾದ ಶಿವನೇ.

ನೃತ್ಯವನ್ನು ಕುರಿತ ನೂರಾರು ಗ್ರಂಥಗಳು ಸಂಸ್ಕೃತ ಹಾಗೂ ದೇಶ ಭಾಷೆಗಳಲ್ಲಿವೆ. ಇವುಗಳಲ್ಲಿ ಭರತನ ನಾಟ್ಯಶಾಸ್ತ್ರ, ನಂದಿಕೇಶ್ವರನ ಅಭಿನಯ ದರ್ಪಣ, ಶಾರ್ಙ್ಗದೇವನ ಸಂಗೀತ ರತ್ನಾಕರ, ಪುಂಡಲೀಕ ವಿಠ್ಠಲನ ನರ್ತನ ನಿರ್ಣಯ ಮೊದಲಾದವು ಮುಖ್ಯವಾದ ಲಕ್ಷಣಗ್ರಂಥಗಳೆಂದು ಭಾವಿಸಲಾಗಿದೆ.

## 4. ಚಿತ್ರಕಲೆ

ಕಾಮಸೂತ್ರಕಾರನ ಅಭಿಮತದಂತೆ 'ಆಲೇಖ್ಯ' ನಾಲ್ಕನೆಯ ಕಲೆ. ಆಲೇಖ್ಯ ಎಂದರೆ ಚಿತ್ರರಚನೆ ಎಂದರ್ಥ. ಚಿತ್ರರಚನಾ ಕಲೆ ವೇದಗಳಷ್ಟೇ ಪ್ರಾಚೀನವಾದುದು ಎಂದು ಪಂಡಿತರು ಅಭಿಪ್ರಾಯ ಪಡುತ್ತಾರೆ. ವೇದ ಕಾಲದಲ್ಲಿ ಯಜ್ಞೋಪಕರಣಗಳಾದ ಕುಂಭ, ಯೂಪ, ವೇದಿಗಳನ್ನು ಲೇಪಗಳಿಂದ ಅಲಂಕರಿಸುತ್ತಿದ್ದ ರೀತಿಯಿಂದಲೂ ತಾಂತ್ರಿಕರ ಶ್ರೀವಿದ್ಯೋ ಪಾಸನೆಗಾಗಿ ರಚಿಸುತ್ತಿದ್ದ ವರ್ಣಮಯವಾದ ಯಂತ್ರ, ಮಂಡಲಗಳಿಂದಲೂ ಚಿತ್ರಕಲೆ ಬೆಳೆಯಿತು. ಹರಪ್ಪ ಸಂಸ್ಕೃತಿಯ ಅವಶೇಷಗಳಾಗಿ ದೊರೆತಿರುವ ಕುಂಭಗಳ ಮೇಲೆ ಬಣ್ಣದ ರೇಖಾಚಿತ್ರಗಳನ್ನು ಕಾಣಬಹುದಾಗಿದೆ.

ಮನೆಗಳಿಗೆ ಮಾಂಗಲ್ಯದಂತೆ ಮಂಗಳಪ್ರದವಾದುದು ಎಂದು ಬಣ್ಣಿಸಲ್ಪಟ್ಟಿರುವ ಚಿತ್ರಕಲೆಯ ಹುಟ್ಟಿನ ಬಗ್ಗೆ ಮಾರ್ಕಂಡೇಯ ಪುರಾಣದಲ್ಲಿ ಒಂದು ಕತೆಯುಂಟು. ಬದರಿಕಾಶ್ರಮದಲ್ಲಿದ್ದ ನಾರಾಯಣನೆಂಬ ಋಷಿಯು ಭೂಮಿ (ಉರ್ವಿ)ಯ ಮೇಲೆ ಮಾವಿನರಸದಿಂದ ಹೆಣ್ಣಿನ ಚಿತ್ರವನ್ನು ಬರೆದು ಅದಕ್ಕೆ ಜೀವ ತುಂಬಿದನಂತೆ. ಆ ಚಿತ್ರವೇ ಊರ್ವಶಿಯಾದಳು. ಅನಂತರ ನಾರಾಯಣ ಋಷಿಯು ಚಿತ್ರರಚನಾ ವಿಧಿವಿಧಾನಗಳ ಸೂತ್ರಗಳನ್ನು

ರಚಿಸಿ, ವಿಶ್ವಕರ್ಮನಿಗೆ ಬೋಧಿಸಿದನಂತೆ. ವಿಶ್ವಕರ್ಮನಿಂದ ಈ ಕಲೆ ಜಗತ್ತಿನಲ್ಲಿ ಪ್ರಚಲಿತವಾಯಿತು.

ಕಾಮಸೂತ್ರದ ವ್ಯಾಖ್ಯಾನಕಾರನಾದ ಯಶೋಧರನು ಚಿತ್ರಕಲೆ ಆರು ಅಂಗಗಳಿಂದ ಕೂಡಿದ್ದಾಗಿರಬೇಕು ಎನ್ನುತ್ತಾನೆ. (೧) ರೂಪಭೇದ (೨) ಪ್ರಮಾಣ (೩) ಭಾವ (೪) ಲಾವಣ್ಯ ಯೋಜನಾ (೫) ಸಾದೃಶ್ಯ (೬) ವರ್ಣಿಕಾಭಂಗ ಎಂಬುವೇ ಆ ಆರು ಅಂಗಗಳು. ಚಿತ್ರರಚನೆಯ ವಿಧಾನದಲ್ಲಿ ನಾಲ್ಕು ಹಂತಗಳುಂಟು. (೧) ಧೌತ : ಅಂದರೆ ಚಿತ್ರ ಬರೆಯಲು ಗೋಡೆ ಅಥವಾ ಬಟ್ಟೆಗೆ ಸುಣ್ಣ ಅಥವಾ ಬಿಳಿಯ ಬಣ್ಣ ಬಳಿದು ಸಿದ್ಧಪಡಿಸಿ ಕೊಳ್ಳುವುದು. (೨) ಘಟ್ಟಿತ ; ಆ ಸಿದ್ಧಪಡಿಸಿದ ಗೋಡೆ–ಬಟ್ಟೆಗೆ ಅನ್ನ ಬಳಿಯುವುದು. (೩) ಲಾಂಛಿತ ; ಹೊರಗಿನ ರೇಖೆಗಳನ್ನು ಇದ್ದಿಲಿನಿಂದ ರಚಿಸಿಕೊಳ್ಳುವುದು. (೪) ರಂಜಿತ : ಬಣ್ಣ ತುಂಬುವುದು, ಆಧುನಿಕ ಚಿತ್ರ ರಚನಾ ವಿಧಾನದಲ್ಲೂ ಸಾಧಾರಣವಾಗಿ ಇದೇ ಸೂತ್ರಗಳನ್ನು ಅನುಸರಿಸ ಲಾಗುವುದು.

ವರ್ಣಚಿತ್ರ ರಚನೆಯಲ್ಲಿ ತೊಡಗುವವರಿಗೆ ಮೂಲವರ್ಣ ಮತ್ತು ಮಿಶ್ರವರ್ಣಗಳ ಜ್ಞಾನ ಅಗತ್ಯ. ಮೂಲವರ್ಣಗಳನ್ನು ಪ್ರಮಾಣಬದ್ಧವಾಗಿ ಮಿಶ್ರ ಮಾಡುವುದರಿಂದ ವಿವಿಧವಾದ ಉಪವರ್ಣಗಳು ಉಂಟಾಗುತ್ತವೆ. ಪ್ರಾಚೀನ ಚಿತ್ರಕಾರರು ಸಾದೃಶ್ಯ ಚಿತ್ರಣಕ್ಕೆ ವಿಶೇಷ ಪ್ರಾಶಸ್ತ್ಯ ನೀಡಿದ್ದರು. ಸಜೀವ-ನಿರ್ಜೀವ ವಸ್ತುಗಳನ್ನೂ, ಏರು ತಗ್ಗುಗಳನ್ನೂ, ಅಲೆ ಹೊಗೆ ಗಾಳಿ ಯಿಂದಾಗುವ ಮರಗಿಡಗಳ ಚಲನೆಗಳನ್ನೂ ವರ್ಣವಿನ್ಯಾಸದಿಂದ ಚಿತ್ರಿಸ ಬಲ್ಲವನೇ ಶ್ರೇಷ್ಠ ಚಿತ್ರಕಾರನೆನಿಸಿಕೊಳ್ಳುತ್ತಿದ್ದನು.

ಚಿತ್ರಗಳು ಸತ್ಯ, ವೈಣಿಕ, ನಾಗರ ಮತ್ತು ಮಿಶ್ರ ಎಂದು ನಾಲ್ಕು ವಿಧ. (೧) ಮರ, ಗಿಡ, ಬಳ್ಳಿ ಮನುಷ್ಯರ ಹೋಲಿಕೆಯ ಅನುಕರಣ ಚಿತ್ರ ಸತ್ಯ (ಸಾದೃಶ್ಯ ಚಿತ್ರ). (೨) ಸಪ್ರಮಾಣವಾದ ಪೂರ್ಣವಾದ ಅಂಗಾಂಗಗಳುಳ್ಳ, ನೃತ್ಯವೇ ಮೊದಲಾದ ದೃಶ್ಯಗಳನ್ನು ಚಿತ್ರಿಸುವ ಚತುರಸ್ರ ಚಿತ್ರ ವೈಣಿಕ. ಇದು ಸುಕುಮಾರವೂ ಗಾಢವಾದ ವರ್ಣಗಳಿಲ್ಲದ್ದೂ ಆಗಿರಬೇಕು. (೩) ಪುಷ್ಟವೂ ದೃಢವೂ ಆದ ಅಂಗಾಂಗಗಳುಳ್ಳ ಪೂರ್ಣಪ್ರಮಾಣದ ಹೆಚ್ಚು

ಚ

ಬಣ್ಣಗಳಿಲ್ಲದ ಮೂಲ್ಯ - ಭೂಷಣ ರಂಜಿತವಾದ ವರ್ತುಲ (ದುಂಡಾದ) ಆಕಾರದ ಚಿತ್ರ ನಾಗರ (೪) ಈ ಎಲ್ಲ ವಿಧಗಳೂ ಸೇರಿರುವುದು ಮಿಶ್ರ ಚಿತ್ರ.

ಮನೆಗಳಲ್ಲಿ ಶೃಂಗಾರ ಹಾಸ್ಯ ಶಾಂತರಸಗಳಿಂದ ಕೂಡಿದ ಚಿತ್ರಗಳನ್ನು ಬರೆಸಬೇಕು. ರಾಜ ಸಭಾಭವನ ಮತ್ತು ದೇವಾಲಯಗಳಲ್ಲಿ ನವರಸಗಳಿಂದ ಕೂಡಿದ ಚಿತ್ರಗಳೂ ಇರಬಹುದು ಎಂದು ವಿಷ್ಣು ಧರ್ಮೋತ್ತರ ಪುರಾಣದಲ್ಲಿ ಹೇಳಿದೆ.

ಚಿತ್ರಗಳಲ್ಲಿ ದೇಹ ಪ್ರಮಾಣ, ಅಂಗಾಂಗಗಳ ಪ್ರಮಾಣ ಆಯಾ ಪುರುಷ - ಸ್ತ್ರೀ ಜಾತಿಗಳಿಗೆ ಅನುಗುಣವಾಗಿ ಇರಬೇಕು ಎಂಬುದು ವಿಧಿ, "ಮಾಡರ್ನ್ ಆರ್ಟ್" "ಅಬ್‌ಸ್ಟ್ರಾಕ್ಟ್ ಆರ್ಟ್"ಗಳ ಈ ಕಾಲದಲ್ಲಿ ಈ ಶಾಸ್ತ್ರಕ್ಕೆ ಬೆಲೆಯಿಲ್ಲವಾದರೂ, ಚಿತ್ರಕಲೆಯನ್ನು ಅರ್ಥಮಾಡಿಕೊಳ್ಳ ಬಯಸುವವರಿಗೆ ಪ್ರಾಚೀನ ಭಾರತೀಯ ಶಾಸ್ತ್ರಜ್ಞರ ಗ್ರಂಥಗಳು ನಿಜವಾಗಿಯೂ ಉಪಕಾರಿ ಗಳಾಗಿವೆ. ಸೋಮೇಶ್ವರನ ಅಭಿಲಷಿತಾರ್ಥ ಚಿಂತಾಮಣಿ, ವಿಷ್ಣುಧರ್ಮೋತ್ತರ ಮಾರ್ಕಂಡೇಯ ಪುರಾಣಗಳು, ಶುಕ್ರನೀತಿ, ವಿದ್ಯಾರಣ್ಯರ ಪಂಚದಶಿ ಮೊದಲಾದ ಗ್ರಂಥಗಳಲ್ಲಿ ಚಿತ್ರಕಲೆಯ ಬಗ್ಗೆ ಸಾಕಷ್ಟು ವಿವರಗಳಿವೆ.

ಚಿತ್ರಕಲೆಯಲ್ಲಿ ರಸಿಕರು ರೇಖಾವಿನ್ಯಾಸವನ್ನೂ, ಸ್ತ್ರೀಯರು ಭೂಷಣ ಗಳನ್ನೂ, ಸಾಮಾನ್ಯ ಜನರು ಬಣ್ಣಗಳ ವೈಖರಿಯನ್ನೂ ಮೆಚ್ಚುತ್ತಾರೆ ಎಂಬ ಲಾಕ್ಷಣಿಕರ ಮಾತು ಇಂದಿಗೂ ಬಹುಪಾಲು ಸತ್ಯವೇ.

ಸಮರ್ಥರಾದ ಶಾಸ್ತ್ರಜ್ಞರಿಂದ ಬರೆಸಲ್ಪಟ್ಟ ಚಿತ್ರವು ಸಂಪತ್ಕರ, ದಾರಿದ್ರ್ಯ ನಿವಾರಕ. ಗೃಹ ದೇವತೆಯನ್ನಿದು ಸಂತೋಷಪಡಿಸುತ್ತದೆ.

ಕಲೆಗಳಲ್ಲಿ ಚಿತ್ರಕಲೆಯೇ ಶ್ರೇಷ್ಠವಾದುದು. ಧರ್ಮಾರ್ಥ ಕಾಮ ಮೋಕ್ಷಪ್ರದವಾದುದೂ ಆಗಿದೆ.

ಕಲಾನಾಂ ಪ್ರವರಂ ಚಿತ್ರಂ ಧರ್ಮಕಾಮಾರ್ಥ ಮೋಕ್ಷದಂ ।
ಮಂಗಲ್ಯಂ ಪ್ರಥಮಂ ಚೈತದ್ಗೃಹೇ ಯತ್ರ ಪ್ರತಿಷ್ಠಿತಂ.

ವಿ.ಧ.ಖ 3, ಅ 41

## 5. ವಿಶೇಷಕ ಛೇದ್ಯ

ವಿಶೇಷಕ ಛೇದ್ಯ ಎನ್ನುವುದು ಮಹಿಳೆಯರ ಅಲಂಕಾರ ಯೋಜನೆಯಲ್ಲಿ ಪ್ರಧಾನವಾದುದು. ಹಣೆಗೆ ತಿಲಕವಿಡುವುದು, ಮುಖ ಮತ್ತು ದೇಹದ ಇತರ ಭಾಗಗಳನ್ನು ಚಂದನ - ಶ್ರೀಗಂಧ ಕೇಸರಿ, ಗೋರೋಜನ, ಕಸ್ತೂರಿ ಮೊದಲಾದ ಸುಗಂಧ ದ್ರವ್ಯಗಳಿಂದ ಮತ್ತು ವರ್ಣಗಳಿಂದ ಅಲಂಕರಿಸುವುದೇ ವಿಶೇಷಕ ಛೇದ್ಯ. ಹಿಂದಿನ ಕಾಲದಲ್ಲಿ ಭೂರ್ಜಪತ್ರವನ್ನು ವಿವಿಧವಾದ ಆಕಾರಗಳಲ್ಲಿ ಕತ್ತರಿಸಿ ಹಣೆಗೆ ತಿಲಕರೂಪದಲ್ಲಿ ಹಚ್ಚಿಕೊಳ್ಳುತ್ತಿದ್ದರೆಂದು ಹೇಳಲಾಗಿದೆ. ಆದ್ದರಿಂದಲೇ ವಿಶೇಷಕ ಛೇದ್ಯ ಎಂಬ ಹೆಸರು ಪ್ರಚಲಿತ ವಾಯಿತೆಂದು ಭಾವಿಸಲಾಗಿದೆ.

ಕೇವಲ ಹಣೆಯ ಮೇಲೆ ತಿಲಕವಿಟ್ಟುಕೊಳ್ಳುವುದು ಮಾತ್ರವಲ್ಲ, ಗಂಧ, ಕುಂಕುಮ ವರ್ಣಗಳಿಂದ ಬಳ್ಳಿ, ಎಲೆ, ಹೂಗಳನ್ನು ಗಲ್ಲ, ಕೆನ್ನೆ, ಹಣೆ, ಕೈಗಳು ಕಾಲ್ಗಳ ಮೇಲೂ ಸ್ತನಗಳ ಮೇಲೂ ಬರೆದುಕೊಳ್ಳುವುದು ಅಲಂಕಾರ ವಿಧಾನ ಗಳಲ್ಲಿ ಒಂದಾಗಿತ್ತು. ಪ್ರಿಯತಮರ ಕಣ್ಣಿಗೆ ಹಬ್ಬವಾಗುವಂತೆ ಅಂಗಾಂಗ ಗಳ ಮೇಲೂ, ಮುಖದ ಮೇಲೂ ಚಿತ್ರ ಚಿತ್ರವಾಗಿ ಲೇಪಿಸಿಕೊಳ್ಳುವುದು ರಸಿಕ ಸ್ತ್ರೀಯರ ಹವ್ಯಾಸಗಳಲ್ಲಿ ಒಂದಾಗಿತ್ತು. ವಿವಾಹ ಕಾಲದಲ್ಲಿ ವಧುವಿನ ಮತ್ತು ಅವಳ ಗೆಳತಿಯರ ಕೆನ್ನೆ, ಗಲ್ಲ, ಹಣೆ, ಕೈ-ಕಾಲುಗಳ ಮೇಲೆ ಸುಗಂಧ ದ್ರವ್ಯಗಳಿಂದ ಹೂಬಳ್ಳಿಗಳನ್ನು ಚಿತ್ರಿಸುವುದು ಇಂದಿಗೂ ರೂಢಿಯಲ್ಲಿದೆ.

ರಾಜಸ್ಥಾನ ಮತ್ತು ಉತ್ತರ ಭಾರತದ ಕೆಲ ಜನಾಂಗಗಳಲ್ಲಿ 'ಮೆಹಂದಿ' ಎಂಬ ಹೆಸರಿನಲ್ಲಿ ಈ ಕಲೆ ಇನ್ನೂ ಪ್ರಚಲಿತವಿದೆ. ಬೇರೆ ಬೇರೆ ಸಂದರ್ಭ ಗಳಲ್ಲಿ ಬೇರೆ ಬೇರೆ ಬಗೆಯಲ್ಲಿ ಅಂಗೈ, ಬೆರಳುಗಳು ಮತ್ತು ಕೈಗಳ ಹಿಂಭಾಗ ವನ್ನು ಅಲಂಕರಿಸಿಕೊಳ್ಳಲಾಗುವುದು. ಮೆಹಂದಿ ಮಂಗಳಕರವಾದುದು. ಪತಿ–ಪತ್ನಿಯರ ಪ್ರೇಮವನ್ನು ಬೆಸೆಯುತಕ್ಕದ್ದು ಮತ್ತು ಪತಿಗೆ ಶ್ರೇಯಸ್ಕರ ವಾದುದು ಎಂಬ ಭಾವನೆ ಉಂಟು.

ಇದು ಪ್ರಧಾನವಾಗಿ ಸ್ತ್ರೀಯರೇ ಕಲಿತು ಪರಿಣತರಾಗುತ್ತಿದ್ದ ಕಲೆಯಾದರೂ ಪುರುಷರೂ ಇದರಲ್ಲಿ ನೈಪುಣ್ಯಗಳಿಸುತ್ತಿದ್ದ ನಿದರ್ಶನ

ಗಳುಂಟು. ವತ್ಸರಾಜನಾದ ಉದಯನ ಈ ಕಲೆಯಲ್ಲಿ ನಿಷ್ಣಾತ ನಾಗಿದ್ದನಂತೆ.

ಪ್ರೌಢರಾದ ಕಾಮಿನಿಯರು ತಮ್ಮ ಕುಚಕುಂಭಗಳಮೇಲೆ ಚಂದನ, ಶ್ರೀಗಂಧ, ಕೇಸರಿ, ಕಸ್ತೂರಿಯುಕ್ತವಾದ ಲೇಪನದಿಂದ ಚಿತ್ರಿಸಿಕೊಳ್ಳು ತ್ತಿದ್ದುದೂ, ಅವರ ಪ್ರಿಯತಮರ ಆಲಿಂಗನದಿಂದ, ಮೈಬೆವರಿದಾಗ ಕರಗಿದ ಆ ಪರಿಮಳ ಗಂಧ ಪ್ರಿಯತಮರ ವಕ್ಷಸ್ಥಳಗಳನ್ನು ಕೆಂಪು ಬಣ್ಣದಿಂದ ಕಂಜಿಸು ತ್ತಿದ್ದುದೂ ಪ್ರಾಚೀನ ಶೃಂಗಾರ-ಪ್ರಣಯ ಕಾವ್ಯಗಳಲ್ಲಿ ಮನೋಹರವಾಗಿ ಬಣ್ಣಿಸಲ್ಪಟ್ಟದೆ.

## 6. ತಂಡುಲ ಬಲಿ ಕುಸುಮ ವಿಕಾರ

ತಂಡುಲ ಬಲಿ ಕುಸುಮವಿಕಾರ ಎಂಬ ಈ ಕಲೆಯ ವ್ಯಾಖ್ಯಾನದ ಬಗ್ಗೆ ಭಿನ್ನಾಭಿಪ್ರಾಯ ಉಂಟು. ಕಾಮಶಾಸ್ತ್ರ ವ್ಯಾಖ್ಯಾನಕಾರನಾದ ಯಶೋಧರನು ಸರಸ್ವತಿ, ಕಾಮದೇವ ದೇವಾಲಯಗಳಲ್ಲಿ ಅಕ್ಕಿಯಿಂದ ರಚಿಸುತ್ತಿದ್ದ ಸುಂದರ ವಾದ ಕಲಾಕೃತಿಗಳು ಎನ್ನುತ್ತಾನೆ. ಮತ್ತೆ ಕೆಲವರು ದೇವತಾ ನೈವೇದ್ಯ ಮತ್ತು ಭೂತ ಬಲಿಗಳನ್ನು ಹೂಗಳಿಂದ ಅಲಂಕರಿಸುವ ರೀತಿ ಎಂದಿದ್ದಾರೆ, ಎ. ಬಿ. ಗಂಗೂಲಿ ಎಂಬುವರು ಇದನ್ನು ತಂಡುಲ ವಿಕಾರ, ಕುಸುಮವಿಕಾರ, ಬಲಿವಿಕಾರ ಎಂದು ಮೂರು ಭಾಗಮಾಡಿ ಕ್ರಮವಾಗಿ ಅಕ್ಕಿಯಿಂದ ರಚಿಸಿದ ರಂಗೋಲಿ, ಹೂಗಳಿಂದ ರಚಿಸಿದ ರಂಗೋಲಿ, ದೇವತಾ ನೈವೇದ್ಯವನ್ನು ಅಣಿಗೊಳಿಸುವ ವಿಧಾನ ಎಂದು ಮೂರು ಭಾಗವಾಗಿ ಅರ್ಥಮಾಡಿದ್ದಾರೆ, ಆದರೆ ಅಕ್ಕಿಯಹಿಟ್ಟು ಮತ್ತು ಹೂಗಳಿಂದ ವಿವಿಧ ರಂಗೋಲಿ ಚಿತ್ರಿಸುವ ಕಲೆ ಎಂಬುದೇ ಸೂಕ್ತವಾದ ವಿವರಣೆ ಎಂದು ಕಂಡು ಬರುತ್ತದೆ.

ವಿಕಾರ ಎಂದರೆ ಮೂಲರೂಪವನ್ನು ಬದಲಿಸಿ ಬೇರೆ ರೂಪ ಕೊಡುವುದು ಎಂದು ನಿಘಂಟುಕಾರರು ತಿಳಿಸುತ್ತಾರೆ. ಹೂಗಳಿಂದ ತಯಾರಿಸಿದ ಬಣ್ಣಗಳಿಂದ ಕೂಡಿದ ಅಕ್ಕಿಹಿಟ್ಟಿನ ರಂಗೋಲಿ ಎಂದು ಇದಕ್ಕೆ ಅರ್ಥಮಾಡಬಹುದಾಗಿದೆ. ವಾತ್ಸ್ಯಾಯನನು ಪಟ್ಟಿ ಮಾಡಿರುವ 64 ಕಲೆಗಳಲ್ಲಿ ರಂಗೋಲಿ ಕುರಿತ ಬೇರೆ ಹೆಸರಿನ ಕಲೆಯೊಂದು ಇಲ್ಲದಿರುವುದೂ ಸಹ ಈ ಹೆಸರು ರಂಗೋಲಿಯನ್ನೇ

ಸೂಚಿಸುತ್ತದೆ ಎಂಬ ಭಾವನೆಗೆ ಅವಕಾಶ ನೀಡುತ್ತದೆ. ಕಾಮಶಾಸ್ತ್ರದ ತೆಲುಗು ವ್ಯಾಖ್ಯಾನಕಾರರಾದ ಪೇಡಿಚರ್ಲ ಆಂಜನೇಯ ಶಾಸ್ತ್ರೀ ಅವರು ಹೀಗೆ ಅರ್ಥಮಾಡಿದ್ದಾರೆ,

ರಂಗೋಲಿ, ರಂಗವಲ್ಲಿ ಎಂಬ ಶಬ್ದದ ಅಪಭ್ರಂಶ. ಇದು ಚಿತ್ರಕಲೆಯಷ್ಟೇ ಪ್ರಾಚೀನವಾದುದು. ಮಂತ್ರ ಶಾಸ್ತ್ರ, ತಂತ್ರಶಾಸ್ತ್ರ ಮತ್ತು ಆಗಮಗಳಲ್ಲಿ ಉಕ್ತವಾಗಿರುವ ಕಾಮ್ಯಕರ್ಮಗಳಲ್ಲಿ ದೇವಾತಾ ವಿಗ್ರಹ ಅಥವಾ ಕಲಶವನ್ನು ಸ್ಥಾಪಿಸುವೆಡೆಯಲ್ಲಿ ಬಣ್ಣಬಣ್ಣದ ಧಾನ್ಯಗಳಿಂದ ಅಥವಾ ಬಣ್ಣ ಹಚ್ಚಿದ ಅಕ್ಕಿಯಿಂದ ಕಲಾತ್ಮಕವಾದ ವಿವಿಧ ಮಂಡಲಗಳನ್ನು ಚಿತ್ರಿಸುವುದುಂಟು. ಬಣ್ಣದ ಹೂಗಳ ರಸದಿಂದ ಅಕ್ಕಿಗೆ ಬಣ್ಣ ಕೊಟ್ಟು ಅದರಿಂದ ದೇವತಾ ಸ್ವರೂಪಗಳನ್ನು ರಚಿಸಿ ಪೂಜಿಸುವ ವಾಡಿಕೆಯೂ ಉಂಟು. ರಂಗವಲ್ಲಿ ಕಲೆಗೆ ಇದೇ ಮೂಲ.

ಹಿಂದೂ ಸ್ತ್ರೀಯರ ಸೌಂದರ್ಯಾರಾಧನ ಪ್ರವೃತ್ತಿಗೆ ರಂಗವಲ್ಲಿ ಕಲೆ ಒಂದು ಉತ್ತಮ ನಿದರ್ಶನ. ಮನೆಯ ಗೋಡೆಗಳ ಮೇಲೆ ಅಲಂಕಾರಿಕವಾಗಿ ಬಣ್ಣ ಬಣ್ಣಗಳಲ್ಲಿ ಚಿತ್ರಿಸುವ ಬಳ್ಳಿ-ಎಲೆ–ಹೂಗಳು ; ಅದೇ ರೀತಿ ನೆಲದ ಮೇಲೆ ಗೋಡೆಯಂಚಿನುದ್ದಕ್ಕೂ, ಬಾಗಿಲುಗಳ ಮುಂದೆ, ದೇವರ ಮಂದಾಸನ ಪುಸ್ತಕಗಳ ಗೂಡುಗಳ ಮುಂದೆ, ಹಜಾರದಲ್ಲಿ, ಕುಳಿತುಕೊಳ್ಳುವ ಮನೆಯ ಮಧ್ಯಭಾಗದಲ್ಲಿ, ಬಣ್ಣಬಣ್ಣಗಳಿಂದ ಹಾಕಿದ ರಂಗೋಲಿ ಮನೆಗೆ ಒಂದು ಅಪೂರ್ವ ಶೋಭೆಯನ್ನು ನೀಡುತ್ತದೆ. ಮನೆಯ ಹೊಸಲಿಗೆ ಕೆಮ್ಮಣ್ಣು ಬಳಿದು ಅದರ ಮೇಲೆ ಹಳದಿ ಮತ್ತು ಬಿಳಿಯಬಣ್ಣದ ಪದ್ಮ, ಸ್ವಸ್ತಿಕಗಳನ್ನು ಚಿತ್ರಿಸುವುದು ಪ್ರಾಚೀನ ಕಾಲದಿಂದ ಬೆಳೆದು ಬಂದಿರುವ ಪದ್ಧತಿ. ಹಿಂದಿನ ಕಾಲದಲ್ಲಿ ಮನೆ ಮತ್ತು ಮನೆಯಂಗಳವನ್ನು ಸಗಣಿಯಿಂದ ಸಾರಿಸಿ ಅದರ ಮೇಲೆ ಅಕ್ಕಿಯನ್ನು ನೆನೆಹಾಕಿ ರುಬ್ಬಿ ಶೋಧಿಸಿ ಬಿಳಿಯ ಹಿಟ್ಟಿನಿಂದ ರಂಗೋಲಿ ಇಡುತ್ತಿದ್ದರು. ಈ ಬಿಳಿಯ ರಂಗೋಲಿಯ ಅಂಚಿಗೆ ಕೆಮ್ಮಣ್ಣಿನ ಗೆರೆ ಎಳೆದು ಅಲಂಕರಿಸುತ್ತಿದ್ದರು. ಸ್ವಲ್ಪ ಹಸಿರು ಛಾಯೆಯ ನೆಲದ ಮೇಲೆ ಈ ಬಿಳಿ-ಕೆಂಪು ರಂಗೋಲಿ ಬಹು ಅಂದವಾಗಿ ನೋಡುವವರ ಕಣ್ಮನಗಳಿಗೆ ಆನಂದ ನೀಡುತ್ತಿತ್ತು.

ವಿಶೇಷ ದಿನಗಳಲ್ಲಿ ಬಣ್ಣಬಣ್ಣದ ಹೂಗಳನ್ನು ಚಿತ್ರ-ಚಿತ್ರವಾಗಿ ಜೋಡಿಸಿ ಮನೆ ಅಂದವನ್ನು ಹೆಚ್ಚಿಸುತ್ತಿದ್ದ ಸಂಪ್ರದಾಯವೂ ಉಂಟು. ಕೇರಳದಲ್ಲಿ ಓಣಂ ಹಬ್ಬದ ದಿನ ಆಂಧ್ರದಲ್ಲಿ ಉಗಾದಿ, ದೀಪಾವಳಿಗಳಂದು, ಕನ್ನಡ ನಾಡಿನಲ್ಲಿ ನವರಾತ್ರಿಯಲ್ಲಿ ಹೂಗಳಿಂದ ರಂಗೋಲಿ ರಚಿಸುವ ಪದ್ಧತಿ ಉಂಟು.

ಶ್ರಾದ್ಧ, ಸೂತಕ ದಿನಗಳಲ್ಲಿ ವಿನಾ ಉಳಿದೆಲ್ಲ ದಿನಗಳಲ್ಲೂ ಮನೆ ಬಾಗಿಲನ್ನು ರಂಗೋಲಿಯಿಂದ ಅಲಂಕರಿಸಲೇಬೇಕೆಂಬುದು ಸಂಪ್ರದಾಯಸ್ಥರ ಮನೆಗಳಲ್ಲಿ ಇಂದಿಗೂ ಉಳಿದಿರುವ ಪದ್ಧತಿ. ಮುಂಜಾನೆ ಸಾರಿಸಿ ರಂಗೋಲಿ ಇಡದ ಹೊಸಿಲನ್ನು ಸಂಪ್ರದಾಯಸ್ಥರು ದಾಟಬಾರದೆಂಬುದು ನಿಯಮ. ರಂಗೋಲಿ ಇಡುವುದು ಕೇವಲ ಗೃಹಾಲಂಕಾರ ಮಾತ್ರವಲ್ಲ ಮಂಗಳಕರವೂ ಹೌದು ಎಂಬುದು ಹಿಂದೂಗಳ ನಂಬಿಕೆ.

## 7. ಪುಷ್ಪಾಸ್ತರಣ

ಹಾಸಿಗೆ ಮತ್ತು ಪೀಠಗಳನ್ನು ಹೂಗಳಿಂದ ಅಲಂಕರಿಸುವುದೇ ಪುಷ್ಪಾಸ್ತರಣ ಕಲೆ. ಹೂವಿನ ಹಾಸಿಗೆ ಎಂದರೆ ಹಾಸಿಗೆಯ ಮೇಲೆ ಹೂಗಳನ್ನು ಹರಡುವುದಷ್ಟೇ ಅಲ್ಲ, ಮೃದುವಾದ ಸುಗಂಧಭರಿತವಾದ ಮತ್ತು ಬಣ್ಣ ಬಣ್ಣದ ಹೂ-ಚಿಗುರು ಎಲೆಗಳನ್ನು ಆರಿಸಿಕೊಂಡು ಹಾಸಿಗೆಯ ಮೇಲೆ ಅಂಚು-ಒಡಲುಗಳನ್ನು ಸುಂದರವಾಗಿ ವಸ್ತ್ರ ಹಾಸಿದಂತೆ ಜೋಡಿಸುವುದೇ ಆಗಿದೆ. ಮರುಗ, ದವನ, ಪಚ್ಚೆತೆನೆಗಳು, ಪಾರಿಜಾತ, ಜಾಜಿ, ಮಲ್ಲಿಗೆ, ಗುಲಾಬಿ, ಸೇವಂತಿಕೆ ಹೂದಳಗಳು ಇಂಥ ಹಾಸಿಗೆ ರಚಿಸಲು ಬಳಸಲ್ಪಡುತ್ತಿದ್ದವು.

ದೇವತಾ ಉತ್ಸವ ಕಾಲದಲ್ಲಿ ಶಯನೋತ್ಸವಕ್ಕಾಗಿ, ವಧೂ-ವರರ ಪ್ರಥಮ ಸಮಾಗಮ ರಾತ್ರಿಯ ಹಾಸಿಗೆಗಳನ್ನು ಈ ರೀತಿ ಸಿದ್ಧಗೊಳಿಸುವುದು ಪದ್ಧತಿ. ಅಭಿಸಾರಿಕೆಯರು ತಮ್ಮ ಶ್ರೀಮಂತ ರಸಿಕಪ್ರಿಯರ ಸಮಾಗಮಕ್ಕಾಗಿ ಇಂಥ ಶಯ್ಯೆಗಳನ್ನು ಸಿದ್ಧಪಡಿಸುತ್ತಿದ್ದರು.

ಹಾಸಿಗೆಗಳಂತೆಯೇ ಪ್ರಿಯತಮರ ಮತ್ತು ಪೂಜ್ಯರಾದ ಗುರು-ಹಿರಿಯರ ಆಸನಗಳನ್ನು ಸಹ ಹೂಗಳಿಂದ ಅಲಂಕರಿಸುತ್ತಿದ್ದ ಪದ್ಧತಿ ಇತ್ತು.

## 8. ದಶನವಸನಾಂಗರಾಗ

ಹಲ್ಲುಗಳನ್ನೂ, ಬಟ್ಟೆಗಳನ್ನೂ ಬಣ್ಣಗಳಿಂದ ಅಲಂಕರಿಸುವುದು ಎಂದು ದಶನವಸನಾಂಗರಾಗಕ್ಕೆ ಯಶೋಧರ ಅರ್ಥಮಾಡಿದ್ದಾನೆ. ಗಂಗೂಲಿ ಯವರು ದಶನರಾಗ, ವಸನರಾಗ, ಅಂಗರಾಗ ಎಂದು ವಿಭಜಿಸಿ, ಮೊದಲಿನ ಎರಡರಂತೆಯೇ ಮೂರನೆಯದಕ್ಕೆ ದೇಹದ ಅಂಗಾಂಗಗಳಿಗೆ ಬಣ್ಣ ಹಾಕಿಕೊಳ್ಳುವುದು ಎನ್ನುತ್ತಾರೆ.

ಹಲ್ಲುಗಳನ್ನೂ, ವಸಡನ್ನೂ ತಿಕ್ಕಿ, ತೊಳೆದು ಶುಭ್ರವಾಗಿಟ್ಟು ಕೊಳ್ಳುವುದು ಕೇವಲ ಆರೋಗ್ಯ ದೃಷ್ಟಿಯಿಂದ ಮಾತ್ರ ಅಗತ್ಯವಲ್ಲ. ಇದು ದೇಹಾಲಂಕರಣದ ಒಂದು ಅಂಗ. ಬಿಳಿಯಹಲ್ಲು ನಗುವ ಬಾಯಿಗೆ ಭೂಷಣ. ಹಲ್ಲುಗಳನ್ನು ಉಜ್ಜಿ ಬಿಳುಪಾಗಿಟ್ಟುಕೊಳ್ಳುವುದು ಸಾಮಾನ್ಯವಾಗಿ ಪ್ರಚಲಿತ ವಿರುವ ಪದ್ಧತಿಯಾದರೂ, ಅವುಗಳಿಗೆ ಬಿಳುಪು ಅಥವ ಬೇರೆ ಬೇರೆ ಬಣ್ಣ ಹಾಕಿಕೊಳ್ಳುವ ಪದ್ಧತಿಯೂ ಇತ್ತೆಂದು ತಿಳಿದು ಬರುತ್ತದೆ. "ದಂತ ಲೇಖಕ" ಎಂಬ ವೃತ್ತಿಯವರೇ ಇದ್ದರೆಂದೂ, ಅವರಿಂದ ಅಲಂಕಾರ ಪ್ರಿಯರು ಹಲ್ಲುಗಳಿಗೆ ಚಿನ್ನ ಬೆಳ್ಳಿಯ ಮುಲಾಮನ್ನು ಹಾಕಿಸಿಕೊಳ್ಳು ತ್ತಿದ್ದರೆಂದೂ ತಿಳಿದುಬರುತ್ತದೆ.

ಕೆಲ ಗ್ರಾಮೀಣ ಮತ್ತು ಆದಿವಾಸೀ ಜನಾಂಗದ ಹೆಂಗಸರು ವಸಡು–ಹಲ್ಲುಗಳಿಗೆ ಕಪ್ಪು, ನೀಲಿ, ಕೆಂಪು ಬಣ್ಣ ಹಾಕಿಕೊಳ್ಳುವ ಪದ್ಧತಿ ಉಂಟು.

ವಸನರಾಗವೆಂದರೆ ಬಟ್ಟೆಗಳಿಗೆ ಬಣ್ಣ ಹಾಕುವುದೆಂದರ್ಥ. ಗಿರಣಿ ಗಳಲ್ಲಿಯೇ ಬಣ್ಣ ಹಾಕಿ ಬಳ್ಳಿ, ಹೂಗಳ ಅಚ್ಚೊತ್ತಿ ಮಾರಾಟಕ್ಕೆ ನೀಡುವ ವ್ಯವಸ್ಥೆ ಇಲ್ಲದಿದ್ದ ಕಾಲದಲ್ಲಿ ಈ ಕೆಲಸವನ್ನು ಕುಶಲ ಕಲೆಯಾಗಿ ಜನ ಕಲಿಯುತ್ತಿದ್ದರು. ಸಾಮಾನ್ಯವಾಗಿ ಅಗಸರು ಈ ಕೆಲಸದಲ್ಲಿ ನಿಪುಣರಾಗಿದ್ದ ರೆಂದು ತಿಳಿದು ಬರುತ್ತದೆ. ಸಂಸ್ಕೃತದಲ್ಲಿ ರಜಕ ಎಂದು ಕರೆಯುವ ಈ

ಜನರಿಗೆ ಈ ಹೆಸರು ಬಂದುದೇ ವಸನ 'ರಂಜನ'–ಎಂಬ ಶಬ್ದದಿಂದ ಎಂದು ಕೆಲ ಪಂಡಿತರೆನ್ನುತ್ತಾರೆ. ರಂಜನ ಮತ್ತು ರಾಗ ಸ್ವಲ್ಪ ಹೆಚ್ಚು ಕಡಿಮೆ ಸಮಾನಾರ್ಥಪದಗಳು. ಮಂಜಿಷ್ಠ, ಲಾಕ್ಷಾ, ರೋಚನ, ನೀಲಿ, ಹರತಾಳ, ಹರಿದ್ರಾ, ಮಹಾರಜನ, ಶಾಕಲ, ಕುಸುಂಬ ಮುಂತಾದ ವನಸ್ಪತಿ ಜನ್ಯ ಬಣ್ಣಗಳಿಂದ ಬಟ್ಟೆಗಳಿಗೆ ಬಣ್ಣ ಹಾಕಿ, ಅಂಚುಕಟ್ಟಿ ವಡಲು, ಸೆರಗುಗಳನ್ನು ಅಲಂಕರಿಸಲಾಗುತ್ತಿತ್ತು. ಜಾಯಿಕಾಯಿ, ಏಲಕ್ಕಿ, ಲವಂಗ, ತಕ್ಕೋಲ, ಅರಿಶಿನಗಳನ್ನು ಅರೆದು ಅದರಲ್ಲಿ ಬಟ್ಟೆಯನ್ನು ಅದ್ದಿ, ಹಿಂಡಿ, ಒಣಗಿಸಿದರೆ ಹೊದೆಯುವ, ಉಡುವ ಬಟ್ಟೆಗಳಿಗೆ ಸುವಾಸನೆಯೂ, ಹಿತವಾದ ಬಣ್ಣವೂ ಬರುತ್ತವೆ ಎಂದು ವಿಷ್ಣುಧರ್ಮೋತ್ತರದಲ್ಲಿ ಹೇಳಿದೆ.

ಇತ್ತೀಚೆಗೆ 'ಬಾಟಿಕ್ ಕಲೆ' ಎಂದು ಹೆಸರುಗಳಿಸುತ್ತಿರುವ ಕಲೆ ನವ್ಯವೇನೂ ಅಲ್ಲ. ಒಂದು ಕಾಲಕ್ಕೆ ಈ ನಾಡಿನಲ್ಲಿ ಪ್ರಚಲಿತವಿದ್ದು ಯಂತ್ರ ಮೋಹದಿಂದ ಮರೆತುಹೋದ ಕಲೆ.

ಅಂಗರಾಗಕ್ಕೆ ಸಂಬಂಧಿಸಿದಂತೆ ಪ್ರತ್ಯೇಕ ಕಲೆಯೊಂದನ್ನು 64 ಕಲೆಗಳಲ್ಲಿ ಸೇರಿಸಿಲ್ಲವಾಗಿ ಗಂಗೂಲಿ ಅವರ ಅಭಿಪ್ರಾಯದಂತೆ ಅದನ್ನೂ ಈ ವಿಭಾಗ ದಲ್ಲಿಯೇ ಪರಿಗಣಿಸಬಹುದು. ಆಧುನಿಕ ಮಹಿಳೆಯರು ಅಲಂಕಾರ ಸಾಧನಗಳೆಂದು ಬಳಸುವ ಕ್ರೀಂ, ಸ್ನೋ, ಪೌಡರ್, ರೋಜ್, ಲಿಪ್‌ಸ್ಟಿಕ್ ಮುಂತಾದವುಗಳೆಲ್ಲ ಪ್ರಾಚೀನ ಅಂಗರಾಗ ಸಾಧನಗಳ ಪ್ರತಿವಸ್ತುಗಳು. ಅಷ್ಟಭೋಗಗಳಲ್ಲಿ "ವಿಲೇಪನ ಭೋಗ"–ಎಂಬುದು ಅಂಗರಾಗ ಕಲೆಯನ್ನು ವಿವರಿಸುತ್ತದೆ, ಫೇನಕ ಎಂಬ ವಸ್ತುವಿಶೇಷಣದಿಂದ ಮೈ-ಮುಖಗಳನ್ನು ತೊಳೆದುಕೊಂಡರೆ ದೇಹಕಾಂತಿ ಹೆಚ್ಚುತ್ತಿತ್ತು. ಲೋಧ್ರದ ಪುಡಿಯನ್ನು ಮುಖಕ್ಕೂ, ಅರಗಿನಿಂದ ತಯಾರಾದ ವಸ್ತುವನ್ನು ತುಟಿಗೂ, ಗೋರಂಟಿ ಎಲೆಯ ರಸವನ್ನು ಉಗುರುಗಳಿಗೂ ಹಚ್ಚಿಕೊಳ್ಳಲಾಗುತ್ತಿತ್ತು. ಆ ಕಾಲದ ನಾಗರೀಕ ಸ್ತ್ರೀ-ಪುರುಷರ ಅಂಗರಾಗ ವಿಧಿ-ವಿಧಾನಗಳನ್ನು ಕಾಮಸೂತ್ರದ 4ನೆಯ ಅಧ್ಯಾಯವಾದ 'ನಾಗರಕ ವೃತ್ತ'ದ ಮೊದಲನೆ ಅಧಿಕರಣದಲ್ಲಿ ವಿವರಿಸಿದೆ. ಅಭಿಲಷಿತಾರ್ಥ ಚಿಂತಾಮಣಿಯ 'ವಿಲೇಪನ ಭೋಗ' ವಿಭಾಗದಲ್ಲೂ ಈ ಕುರಿತ ವಿವರಗಳಿವೆ. ಯಶೋಧರನು ಈ ಕಲೆಯನ್ನು "ರಂಜನ ವಿಧಿ" ಎಂದೂ ಕರೆಯಬಹುದು ಎಂದಿದ್ದಾನೆ. ಅರ್ಥಾತ್

ದೇಹದ ಅಂಗಾಂಗಗಳನ್ನು ಆಕರ್ಷಣೀಯ ಮತ್ತು ಸ್ವಾಭಾವಿಕ ವರ್ಣಗಳಿಂದ ರಂಜಿಸುವಂತೆ ಅಲಂಕರಿಸಿಕೊಳ್ಳುವುದು ಎಂದು ಹೇಳಬಹುದಾಗಿದೆ.

## 9. ಮಣಿಭೂಮಿಕಾಕರ್ಮ

ಮಣಿಭೂಮಿಕಾಕರ್ಮ ಎಂಬುದಕ್ಕೆ ಗಂಗೂಲಿ ಅವರು ನೆಲಕ್ಕೆ ವಜ್ರಾದಿಗಳನ್ನು ಹೊದ್ದಿಸುವ ಕಲೆ ಎಂದಿದ್ದಾರೆ. ಭಾಸ್ಕರ ನರಸಿಂಹನೆಂಬ ಕಾಮಶಾಸ್ತ್ರ ವ್ಯಾಖ್ಯಾನಕಾರರೊಬ್ಬರು ಮಣಿಗಳಿಂದ ಗೊಂಬೆಗಳನ್ನು ರಚಿಸುವ ಕಲೆ ಎಂದಿದ್ದಾರೆ. ಲಲಿತವಿಸ್ತರದ ಅನುವಾದಕರಾದ ಮಿತ್ರ ಅವರು ಮಣಿಗಳಿಂದ ಆಭರಣಗಳನ್ನು ರಚಿಸುವುದು – ಎಂದಿದ್ದಾರೆ. ಈ ಅರ್ಥವೇ ಸೂಕ್ತವೆಂದು ಕಾಣುತ್ತದೆ. ಒಂದು ಕಾಲಕ್ಕೆ ಭಾರತವೇನೋ ಶ್ರೀಮಂತ ರಾಷ್ಟ್ರವಾಗಿತ್ತು. ದೇವಾಲಯ, ರಾಜಗೃಹಗಳ ಬಾಗಿಲುವಾಡ, ಶಿಖರಗಳಿಗೆ ಚಿನ್ನದ ತಗಡನ್ನು ಹೊದಿಸಿರುತ್ತಿದ್ದರು ಎಂಬುದೂ ನಿಜವೇ ಇರಬಹುದು. ಆದರೆ ಪಚ್ಚೆ, ಕೆಂಪು, ಗೋಮೇಧಕ, ಪುಷ್ಯರಾಗಗಳನ್ನು ನೆಲಕ್ಕೆ ಹೊದ್ದಿಸುತ್ತಿದ್ದರೆಂದಾಗಲೀ, ಈ ಕಲೆಯಲ್ಲಿ ಜನತೆ ಪರಿಣತರಾಗಿರುತ್ತಿದ್ದರೆಂದಾಗಲಿ ನಂಬುವುದು ಕಷ್ಟ.

ಮಣಿಗಳಿಂದ ಗೊಂಬೆಗಳನ್ನು ರಚಿಸುವುದು ನಿಜವಾಗಿಯೂ ಕಲೆಯೆ. ಆದರೆ ಕೇವಲ ಮಣಿಗಳಿಂದಲೇ ಗೊಂಬೆಗಳನ್ನು ರಚಿಸುತ್ತಿದ್ದರೆ ಎಂಬುದು ಕುತೂಹಲಕಾರಿ. ಬಟ್ಟೆಯಿಂದ ನಿರ್ಮಿಸಿದ ಗೊಂಬೆಗಳಿಗೆ ಗಾಜಿನ ಮಣಿಗಳನ್ನು ಹೊದ್ದಿಸಿ, ಪೂರ್ಣವಾಗಿ ಮಣಿಗಳಿಂದ ಮಾಡಿದ ಗೊಂಬೆಯಂತೆ ವರ್ಣ ರಂಜಿತವಾಗಿ ರಚಿಸುತ್ತಿದ್ದುದುಂಟು. ಈಗಲೂ ಇದು ಕಲಾಪ್ರಿಯ ಹೆಣ್ಣು ಮಕ್ಕಳ ಹವ್ಯಾಸ.

ಚಿನ್ನದ ಚೌಕಟ್ಟಿನಲ್ಲಿ ವಜ್ರಗಳನ್ನು ಹುದುಗಿಸಿ ಆಭರಣಗಳನ್ನು ತಯಾರಿಸುವುದು ಸ್ವರ್ಣಕಾರರ ವೃತ್ತಿ-ಕಲೆ. ಆಭರಣಗಳನ್ನು ತೊಡುವವರ ಶ್ರೀಮಂತಿಗೆ ಮತ್ತು ಸೌಂದರ್ಯಾಭಿರುಚಿಗೆ ಅನುಗುಣವಾಗಿ ವಿವಿಧ ಆಕಾರ, ಮತ್ತು ರೂಪದ ಅಪೂರ್ವ ವಜ್ರಗಳನ್ನು ಹುದುಗಿಸಿ ಬಣ್ಣಬಣ್ಣದ ವಜ್ರಗಳನ್ನು ಜೋಡಿಸಿ ಕಂಠಾಭರಣ, ಪದಕ, ಜಡೆಬಿಲ್ಲೆ, ಪಟ್ಟಿ, ಮೊದಲಾದವು

ಗಳನ್ನು ರಚಿಸಲಾಗುತ್ತಿತ್ತು. ಕೆಲವು ದೊಡ್ಡ ಪ್ರಾಚೀನ ದೇವಾಲಯಗಳಲ್ಲಿ
ಇಂದಿಗೂ ಇಂಥ ವೈವಿಧ್ಯಪೂರ್ಣ ಆಭರಣ, ಅಲಂಕರಣಗಳನ್ನು ಕಾಣಬಹುದು.

## 10. ಶಯನರಚನೆ

ಭೋಗ ಜೀವನದಲ್ಲಿ ಶಯ್ಯಾರಚನೆ ಬಹು ಮುಖ್ಯ ಅಂಶ. ಇದು
ಅಷ್ಟಭೋಗಗಳಲ್ಲಿ ಒಂದು. ಶಯ್ಯಾರಚನೆಯಲ್ಲಿ ಪರಿಗಣಿಸಲ್ಪಡುತ್ತಿದ್ದ
ಪ್ರಧಾನ ಅಂಶಗಳು ಎರಡು. ಒಂದು ಶಯ್ಯೆಯನ್ನು ಉಪಯೋಗಿಸುವ
ವ್ಯಕ್ತಿ ; ಎರಡನೆಯದು ಋತು. ಯಶೋಧರನು ಬೇಸಿಗೆ ಮತ್ತು ಚಳಿಗಾಲ
ಗಳಿಗೆ ಅನುಗುಣವಾಗಿ ಹಾಸಿಗೆಗಳನ್ನು ಸಿದ್ಧಪಡಿಸಬೇಕು ಎನ್ನುತ್ತಾನೆ.
ಬೇಸಿಗೆಯಲ್ಲಿ ತಂಪಾಗಿರುವಂಥ ವಸ್ತು, ವಸ್ತ್ರಗಳಿಂದಲೂ, ಚಳಿಗಾಲದಲ್ಲಿ
ಬೆಚ್ಚಗಿರುವಂಥ ವಸ್ತು, ವಸ್ತ್ರಗಳಿಂದಲೂ ಹಾಸಿಗೆ ರಚಿತವಾಗಬೇಕು.

ಇದೇ ರೀತಿ ಹಾಸಿಗೆ ಉಪಯೋಗಿಸುವ ವ್ಯಕ್ತಿಯನ್ನೂ ಗಮನಿಸಬೇಕು.
ರಕ್ತ, ವಿರಕ್ತ, ಮಧ್ಯಸ್ಥ ಅಥವ ಅನುರಾಗಿ, ವಿರಾಗಿ, ಉದಾಶೀನ ಎಂಬ
ವ್ಯಕ್ತಿಭೇಧಗಳಿಗೆ ಉಚಿತವಾದ ಶಯ್ಯೆಗಳುಂಟು. ರಸಿಕನೂ, ಅನುರಾಗಿಯೂ
ಆದವನಿಗೆ ಗಟ್ಟಿಹಲಗೆಯಮೇಲೆ ಚಾಪೆ, ಅಜಿನಗಳನ್ನು ಹಾಸುವುದೂ,
ಸನ್ಯಾಸಿಗೆ ಮಿಥುನ ಚಿತ್ರಗಳನ್ನು ಕೆತ್ತಿದ ಮಂಚದ ಮೇಲೆ ಸುಪ್ಪತ್ತಿಗೆಯನ್ನು
ಹಾಸುವುದೂ ಸಲ್ಲ. ಮಲಗುವವನ ಅಭ್ಯಾಸ, ಅಭಿರುಚಿಗಳನ್ನೂ ಹಾಸಿಗೆ
ಸಿದ್ಧಪಡಿಸುವಾಗ ಗಮನಿಸುವುದಗತ್ಯ. ಸುಖ ನಿದ್ರೆಯೇ ಒಳ್ಳೆಯ ಹಾಸಿಗೆಯ
ಉದ್ದೇಶ. ಅಭ್ಯಾಸವಿಲ್ಲದವರಿಗೆ ಚಾಪೆ ಹಾಸಿಕೊಟ್ಟರೆ ನಿದ್ರೆ ಕೆಡಿಸಿದಷ್ಟೆ ಪಾಪ.

ಪ್ರಾಚೀನ ಕಾವ್ಯಗಳಲ್ಲಿ ಹಲವು ಬಗೆಯ ಶಯ್ಯೆಗಳ ಪ್ರಸ್ತಾಪ
ಬರುತ್ತದೆ. ಸಾವನ್ನು ಎದುರುನೋಡುತ್ತಾ ಬ್ರಹ್ಮಚಾರಿ ಭೀಷ್ಮ ಮಲಗಿದ್ದು
ಶರಶಯ್ಯೆಯಲ್ಲಿ. ಸಮುದ್ರರಾಜನ ಮನ ಒಲಿಸಲು ಶ್ರೀರಾಮ ಪವಡಿಸಿದ್ದು
ದರ್ಭೆಗಳ ಹಾಸಿಗೆಯ ಮೇಲೆ. ತನ್ನ ಅಪೂರ್ವ, ಅನಿರೀಕ್ಷಿತ ರಾಜಾತಿಥಿಗಳಾದ
ಸೀತಾರಾಮಲಕ್ಷ್ಮಣರಿಗೆ ಗುಹ ರಚಿಸಿದ್ದು ಚಿಗುರೆಲೆಗಳ ಹಾಸಿಗೆ. ದುಷ್ಯಂತ
ನನ್ನು ಕಂಡು ಮೋಹಿತಳಾದ ಶಕುಂತಲೆ ಹೊರಳಾಡಿದ್ದು ಹೂವಿನ ಹಾಸಿಗೆಯ
ಮೇಲೆ. ಬಾಣನ ಕಥಾನಾಯಕಿ ಕಾದಂಬರಿಗೆ ಚಂದ್ರಾಪೀಡನ ನೆನಪಿನಿಂದ

ವಿರಹಜ್ವರ ಬಂದಾಗ ಅವಳ ಸಖಿಯರು ಅವಳ ದೇಹಕ್ಕೆ ಚಂದನದ ತಂಪುಗಂಧ ಲೇಪಿಸಿ, ಸ್ತನಗಳ ಮೇಲೆ ಕಮಲಪತ್ರಗಳನ್ನು ಹೊದಿಸಿ, ಕಮಲದಳಗಳ ಹಾಸಿಗೆಯ ಮೇಲೆ ಮಲಗಿಸಿ, ಕಮಲದ ಹೂಗಳಿಂದ ಗಾಳಿ ಬೀಸಿದರಂತೆ! ಭಾಸನ 'ಸ್ವಪ್ನ ವಾಸವದತ್ತ'ದ ನಾಯಕಿಗೆ ತಲೆನೋವು ಬಂದಾಗ ಅವಳು ಸಮುದ್ರಗೃಹದಲ್ಲಿ ಹಂಸತೂಲಿಕಾತಲ್ಪದಲ್ಲಿ ಮಲಗಿದಳಂತೆ.

ಭೇತಾಳಪಂಚವಿಂಶತಿಯಲ್ಲಿ ಶಯ್ಯಾಭೋಗಿಯೊಬ್ಬನ ಕಥೆ ಇದೆ. ಹಾಸಿಗೆಗಳ ಬಗೆಗೆ ಅತ್ಯಂತ ನಿಷ್ಣಾತನೆನಿಸಿದವನೊಬ್ಬನ ದಿಗಂತ ವಿಶ್ರಾಂತ ಕೀರ್ತಿಯಿಂದ ಕುತೂಹಲ ಕೆರಳಿದ ರಾಜನೊಬ್ಬ ಆ ಶಯ್ಯಾಭೋಗಿಯನ್ನು ಪರೀಕ್ಷಿಸಲೆಂದು ಅರಮನೆಗೆ ಕರೆಸಿದನಂತೆ. ಅರಮನೆ ಶಯ್ಯಾಗೃಹದಲ್ಲಿ ಶ್ರೀಗಂಧದ ಮರದಿಂದ ಮಾಡಿದ, ದಂತದ ಕೆತ್ತನೆಗಳನ್ನು ಹುದುಗಿಸಿ ಹೂಗಳಿಂದ ಅಲಂಕರಿಸಿದ್ದ ಮಂಚದಮೇಲೆ, ಹೂವು-ರೇಷ್ಮೆಗಳಿಗಿಂತ ಮೃದು ವಾದ ಹಲವು ಸುಪ್ಪತ್ತಿಗೆಯ ಹಾಸಿಗೆಗಳನ್ನು ಹಾಸಿ, ರೇಷಿಮೆ ಮಕಮಲ್ಲಿನ ಹಾಸುಗಳನ್ನು ಹಾಸಿ ಶಯ್ಯಾಭೋಗಿಗೆ ಆ ಹಾಸಿಗೆಯನ್ನು ಪರೀಕ್ಷಿಸಲು ಹೇಳಲಾಯಿತು. ಸರ್ವಸಂಗ ಪರಿತ್ಯಾಗಿಯಾದ ಸನ್ಯಾಸಿಯಾದರೂ ದರ್ಶನ ಮಾತ್ರದಿಂದ ಭೋಗಾಸಕ್ತನಾಗಬಹುದಾಗಿದ್ದ ಆ ಶಯ್ಯೆಯ ಮೇಲೆ ಮಲಗಿ ಕೆಲಗಳಿಗೆಗಳಲ್ಲೇ ಮೇಲೆದ್ದ ಶಯ್ಯಾಭೋಗಿ—

"ಈ ಹಾಸಿಗೆಯಡಿ ಎಲ್ಲೋ ಒಂದು ಕೂದಲಿದೆ."

ಎಂದನಂತೆ. ರಾಜಪರಿವಾರದವರು ನಕ್ಕರು. ರಾಜಸೇವಕರು

"ಪಕ್ಕಾ ಆಸಾಮಿ"

ಎಂದು ಗೇಲಿಮಾಡಿದರು.

"ಏನು ಕೂದಲೊ? ಆನೆಯದೊ, ಕುದುರೆಯದೋ, ಅಥವ ಯಾವಳಾದರೂ ವಧುವಿನದೊ ?"

ಎಂದು ಕೀಟಲೆ ಮಾಡಿದರು.

ಆದರೆ ರಾಜಾಜ್ಞೆಯಂತೆ ಪರೀಕ್ಷಿಸಿದಾಗ ಸುಪ್ಪತ್ತಿಗೆಗಳ ಕೆಳಗೆ ಒಂದು ಕೂದಲು ಸಿಕ್ಕಿತಂತೆ!

ಈ ಕಥೆಯಲ್ಲಿ ಉತ್ಪ್ರೇಕ್ಷೆಯೇ ಅತಿಯಾಗಿದೆ ನಿಜ. ಆದರೆ ಪರಿಷ್ಕರಣ ಕೌಶಲವೇನೆಂಬುದರ ಸುಂದರ ಕಲ್ಪನೆಯೂ ಇದೆ.

### 11. ಉದಕವಾದ್ಯ

ಅರವತ್ನಾಲ್ಕು ಕಲೆಗಳಲ್ಲಿ ವಾದ್ಯವಾದನ ಕಲೆಯನ್ನು ಎರಡನೆಯದಾಗಿ ಪರಿಗಣಿಸಿದ್ದೂ, ಉದಕವಾದ್ಯ ಮತ್ತು ವೀಣಾ-ಡಮರುಕ (27) ಗಳನ್ನು ಪ್ರತ್ಯೇಕ ಕಲೆಗಳೆಂದು ಪರಿಗಣಿಸಲಾಗಿದೆ. ಬಹುಶಃ ಉದಕವಾದ್ಯದ ನಾವೀನ್ಯ ಮತ್ತು ವೀಣಾ-ಡಮರುಕಗಳ ವೈಶಿಷ್ಟ್ಯವೇ ಈ ವಿಭಜನೆಗೆ ಕಾರಣ ವಿರಬಹುದು.

ಉದಕವಾದ್ಯ ಎಂದರೆ ನೀರಿನಿಂದ ಇಂಪಾದ ಧ್ವನಿ ಹೊರಡುವಂತೆ ರಚಿತವಾದ ವಾದ್ಯ ಎಂದರ್ಥ. ಇದನ್ನು 'ಜಲತರಂಗ' ಎಂದೂ ಕರೆಯು ತ್ತಾರೆ. ಯೂರೋಪಿನ ಫ್ರಾಂಕ್ಲಿನ್ ಎಂಬು ಸುಪ್ರಸಿದ್ಧ ಸಂಗೀತಗಾರ ಈ ವಾದ್ಯವಿಶೇಷದ ಜನಕನೆಂದು ಹೇಳುತ್ತಾರೆ. ಆದರೆ ಕ್ರಿ.ಪೂ. 200-300 ರಷ್ಟು ಹಿಂದೆಯೇ ರಚಿತವಾದ ಕಾಮಸೂತ್ರದಲ್ಲಿ ಈ ವಾದ್ಯವಿಶೇಷದ ಹೆಸರಿರುವುದರಿಂದ ಇದು ಮೂಲತಃ ಭಾರತೀಯ ವಾದ್ಯವೆಂದು ನಂಬ ಬಹುದಾಗಿದೆ. ಈಗಿನಂತೆ ಬಿಳಿ ಜೇಡಿಮಣ್ಣಿನ (ಪೋರ್ಸಲೀನ್) ಬಟ್ಟಲುಗಳಲ್ಲಿ ನೀರು ತುಂಬಿಕೊಂಡು ಬಾರಿಸುವ ವ್ಯವಸ್ಥೆ ಫ್ರಾಂಕ್ಲಿನ್ ಕಲ್ಪನೆ ಇದ್ದರೂ ಇರಬಹುದು. ಗಂಗೂಲಿಯವರು "ಕೈಯಿಂದ ನೀರನ್ನು ತಟ್ಟಿ ಇಂಪಾದ ಧ್ವನಿ ಹೊರಡುವಂತೆ ಮಾಡುವ ಕಲೆ" ಎನ್ನುತ್ತಾರೆ.

ಈಗ ಪ್ರಚಲಿತವಿರುವ ಜಲತರಂಗ ನಾಮಾಂಕಿತ ಉದಕವಾದ್ಯದಲ್ಲಿ ವಿವಿಧ ಪ್ರಮಾಣದಲ್ಲಿ ನೀರುತುಂಬಿದ 18 ಬಟ್ಟಲುಗಳಿರುತ್ತವೆ. ಎಡದಿಂದ ಬಲಕ್ಕೆ ಬಟ್ಟಲುಗಳಲ್ಲಿರುವ ನೀರಿನ ಪ್ರಮಾಣ ಕ್ರಮವಾಗಿ ಹೆಚ್ಚಾಗಿರುತ್ತದೆ.

ತೆಳ್ಳನೆಯ ಬಿದುರು ಕಡ್ಡಿಗಳಿಂದ ಈ ಬಟ್ಟಲುಗಳ ಮೇಲೆ ತಟ್ಟುವ ಮೂಲಕ ವಿವಿಧ ಸ್ವರಗಳು ಉಂಟಾಗುತ್ತವೆ. ಇದನ್ನು ತನಿಯಾಗಿ ಮತ್ತು ಮೇಳಗಳೊಂದಿಗೆ ನುಡಿಸುವ ಸಂಪ್ರದಾಯ ಉಂಟು.

## 12. ಉದಕಾಘಾತ

ನೀರನ್ನು ಅಂಗೈಗಳಿಂದ ಅಪ್ಪಳಿಸುವ ಮೂಲಕ ಎಲ್ಲ ದಿಕ್ಕುಗಳಿಗೂ ಚಿಮ್ಮುವಂತೆ ಮಾಡುವುದು ; ನೀರನ್ನು ಚಿಮುಕಿಸುವುದು ಮತ್ತು ನೀರನ್ನು ಪಿಚಕಾರಿಯಲ್ಲಿ ತುಂಬಿಕೊಂಡು ಒಬ್ಬರ ಮೇಲೊಬ್ಬರು ತೂರುವುದು ಎಂದು ವ್ಯಾಖ್ಯಾನಕಾರರು ಉದಕಾಘಾತಕ್ಕೆ ಒಂದೊಂದು ವಿವರಣೆ ನೀಡಿದ್ದಾರೆ. ಕೆಲವರು ಉದಕವಾದ್ಯ-ಉದಕಾಘಾತಗಳೆರಡೂ ಜಲಕ್ರೀಡೆಯ ವಿಧಾನಗಳು ಎಂದಿದ್ದಾರೆ. ಜೀವಗೋಸ್ವಾಮಿಯವರು ಜಲಸ್ತಂಭನ ವಿದ್ಯೆ ಇದೆಂದು ಹೇಳುತ್ತಾರೆ.

## 13. ಚಿತ್ರಾಶ್ವಯೋಗ-ಚಿತ್ರಯೋಗ

ಚಿತ್ರ ವಿಚಿತ್ರವಾದ ವೇಷಗಳನ್ನು ಧರಿಸುವುದು ಚಿತ್ರಾಶ್ವಯೋಗ ಎನ್ನುತ್ತಾರೆ ಮೋಡಿಚರ್ಲ ಆಂಜನೇಯ ಶಾಸ್ತ್ರಿಗಳು. ಭಾಸ್ಕರನೃಸಿಂಹ ಮತ್ತು ಮಿತ್ರ ಅವರು ಚಿತ್ರಕಲೆಯೇ ಇದು ಎನ್ನುತ್ತಾರೆ. ಜೀವಗೋಸ್ವಾಮಿ ಚಿತ್ರವಿಚಿತ್ರವಾದ ಯಕ್ಷಿಣಿ ವಿದ್ಯೆ ಎಂದಿದ್ದಾರೆ. ಗಂಗೋಲಿ ಅವರು ಇದನ್ನು ಸಮರ್ಥಿಸಿದ್ದಾರೆ. ಕಾಮಸೂತ್ರದ ಔಪನಿಷಧಿಕ ಅಧಿಕರಣದಲ್ಲಿ ವಿವರಿಸಿರುವುದೆಲ್ಲ ಚಿತ್ರಯೋಗವೇ ಎಂದಿದ್ದಾರೆ. ಈ ವಿವರಣೆಯಂತೆ ಕೆಲ ಮೂಲಿಕೆ ಅಥವ ಕೃತ್ಯಗಳಿಂದ ವಶೀಕರಣ ಹಾಗೂ ವಿದ್ವೇಷಣಗಳನ್ನು ಸಾಧಿಸುವುದು. ಕಪ್ಪು ಕೂದಲನ್ನು ಬಿಳುಪಾಗಿಸುವುದು, ಬಿಳಿಯ ಕೂದಲನ್ನು ಕಪ್ಪಾಗಿಸುವುದು, ಇದ್ದಕ್ಕಿದ್ದ ಹಾಗೆ ಕಣ್ಣ ಮುಂದಿನ ವಸ್ತುಗಳನ್ನು ಕಾಣದಂತೆ ಮಾಡುವುದು, ಗೋಡೆ, ನೆಲಗಳ ಮೇಲೆ ಹಾವು-ಚೇಳು ಹರಿದಾಡುವಂತೆ ಭ್ರಮೆಮೂಡಿಸುವುದು. ಮಣ್ಣಿನ ಮಡಿಕೆಯನ್ನು ತಾಮ್ರದ ಕೊಡದಂತೆ ತೋರುವುದು ಮೊದಲಾದ ಚಮತ್ಕಾರಗಳು ಚಿತ್ರಯೋಗ ಎನಿಸುತ್ತದೆ.

## 14. ಮಾಲ್ಯಗ್ರಥನವಿಕಲ್ಪ

ದೇವತಾ ಪೂಜಾರ್ಥವಾಗಿ ಮತ್ತು ಸ್ತ್ರೀ ಪುರುಷರ ಅಲಂಕಾರಕ್ಕಾಗಿ

ಹೂಮಾಲೆಗಳನ್ನು ರಚಿಸುವ ಕಲೆ ಇದು. ಉದಯನ ರಾಣಿ ವಾಸವದತ್ತ ಈ ಕಲೆಯಲ್ಲಿ ನಿಷ್ಣಾತಳಾಗಿದ್ದಳಂತೆ.

ಹೂಹಾರಗಳಿಗೆ ಭಾರತೀಯ ಧಾರ್ಮಿಕ, ಸಾಮಾಜಿಕ ಜೀವನದಲ್ಲಿ ಬಹು ಮುಖ್ಯ ಸ್ಥಾನ ಉಂಟು. ಈಗ ರಾಜಕೀಯ ಜೀವನದಲ್ಲಿ ಇವಕ್ಕೆ ಪ್ರಶಸ್ತ ಸ್ಥಾನ ಲಭ್ಯವಾಗಿದೆ. ಅಧಿಕಾರಸ್ಥರಿಗೆ ಎಷ್ಟು ದೊಡ್ಡ ಹೂಹಾರ ಹಾಕಿದರೆ ಅಷ್ಟು ಶೀಘ್ರವಾಗಿ ತಮ್ಮ ಕೆಲಸ ಸಾಧಿಸಿಕೊಳ್ಳಬಹುದೆಂಬ ನಂಬಿಕೆ ಕಾರ್ಯಸಾಧಕರಲ್ಲಿ ಬೆಳೆದಿದೆ. ಕೆಲ ವೈಷ್ಣವ ದೇವಾಲಯಗಳಲ್ಲಿ ನಡೆಯುವ ತೋಮಾಲ ಸೇವೆ ಬಹುವರ್ಣರಂಜಿತವಾದ ಉತ್ಸವ. ನಮ್ಮ ದೇವರುಗಳಲ್ಲಿ ವಿಷ್ಣು ತುಳಸಿ ಮಾಲೆಯ ಪ್ರಿಯ. ಶಿವ ಕಲ್ಹಾರ, ಬಿಲ್ವ ಮಾಲೆಗಳಿಂದ ಸುಪ್ರೀತನಾಗುತ್ತಾನೆ. ಲಕ್ಷ್ಮಿಗೆ ಕಮಲಹಾರ ಬಹುಪ್ರಿಯವಾದುದು. ಈಗಿನ ಮಹಿಳೆಯರು ನಿರ್ಗಂಧ ಕುಸುಮವಾದ ಕನಕಾಂಬರಿಯ ಬಣ್ಣಕ್ಕೆ ಮಾರು ಹೋಗಿದ್ದಾರೆ. ಆದರೆ ಪೂರ್ವಕಾಲದ ಸ್ತ್ರೀ-ಪುರುಷರು ಹೂವಿನ ಬಣ್ಣಕ್ಕೆ ಮಾತ್ರವಲ್ಲ ಪರಿಮಳಕ್ಕೂ ಪ್ರಾಶಸ್ತ್ಯ ನೀಡುತ್ತಿದ್ದರು. ಕಣಗಲ ಹೂವಿನ ಬಣ್ಣ ಮನೋಹರವಾಗಿದ್ದರೂ ಅದರ ಹಾರ ರಣೋತ್ಸಾಹಿಗಳಿಗೂ ಬಲಿ ಪ್ರಾಣಿಗಳಿಗೂ ಮೀಸಲಾಗಿತ್ತು.

ಮಲ್ಲಿಗೆ, ಜಾಜಿ, ಸಂಪಿಗೆ, ಸೇವಂತಿಗೆ, ಸುಗಂಧರಾಜ, ಕಮಲ, ಗುಲಾಬಿ, ದವನ, ಮರುಗ, ಪಚ್ಚೆತೆನೆಗಳಿಂದ ಸುಂದರವಾಗಿ ವಿವಿಧ ಆಕಾರ, ರೂಪಗಳಲ್ಲಿ ಹಾರಗಳನ್ನು ರಚಿಸುವುದಕ್ಕೆ ವಿಶೇಷ ಅಭ್ಯಾಸ, ನೈಪುಣ್ಯತೆಗಳು ಬೇಕು. ಬೆಂಗಳೂರು ನಗರದ ಕೆಲ ಹೂವಾಡಿಗರು ಈ ಕಲೆಯಲ್ಲಿ ನಿಪುಣ ರಾಗಿದ್ದಾರೆ. ಎಂದೇ ಈ ಊರಿನ ಹಾರಗಳು ಜಗತ್ಪ್ರಸಿದ್ಧವಾಗಿವೆ.

### 15. ಶೇಖರಕಾಪೀಡ ಯೋಜನ

ಶೇಖರಕಾಪೀಡ ಯೋಜನ ಎನ್ನುವುದೂ ಹೂಗಾರ ವಿದ್ಯೆಯೆ. ಈ ಮೊದಲಿನ ಮಾಲ್ಯಗ್ರಥನಕ್ಕೂ ಇದಕ್ಕೂ ಇರುವ ಅಂತರ ಸೂಕ್ಷ್ಮವಾದುದು. ಪೋಣಿಸುವುದು ಅಥವ ದಾರದ ಸಹಾಯದಿಂದ ಹೂ ಕಟ್ಟುವುದು 'ಗ್ರಥನ' ವಾದರೆ, ಜೋಡಿಸುವುದು ಅಥವ ಹೊಂದಿಸುವುದು 'ಯೋಜನ' ವಾಗುತ್ತದೆ.

ಸ್ಥೂಲವಾಗಿ ಹೇಳುವುದಾದರೆ ಹಾರ ರಚನೆ ಗ್ರಥನ, ತುರಾಯಿ ರಚನೆ ಯೋಜನ. ಆದರೆ ಶೇಖರಕಾಪೀಡಯೋಜನ ಎಂದರೆ ತುರಾಯಿ ಕಟ್ಟುವುದಷ್ಟೆ ಅಲ್ಲ. ರಟ್ಟು, ಬಿದುರಿನ ಕಡ್ಡಿ ಮುಂತಾದವುಗಳಿಗೆ ಬಣ್ಣ ಬಣ್ಣದ ಹೂಗಳನ್ನು ಜೋಡಿಸಿ ಹೊಲೆದು ಮಾಡಿದ ಶಿರೋಭೂಷಣ, ಅಡ್ಡಿಕೆ, ತೋಳ ಬಂದಿಯಂಥ ಹೂವಿನ ಆಭರಣಗಳ ರಚನಾ ವಿಧಾನ. ಮೊಗ್ಗಿನ ಜಡೆ ಹೆಣೆಯುವುದನ್ನೂ ಈ ಕಲೆಯಲ್ಲಿ ಸೇರಿಸಬಹುದು. ದೇವಾಲಯಗಳಲ್ಲಿ ಮಾಡುವ ಪೂಲಂಗಿ ಸೇವೆ, ಮೊದಲಾದ ಹೂವಿನ ಅಲಂಕಾರಗಳು ಇದೇ ಕಲಾವಿಧಾನಕ್ಕೆ ಸೇರುತ್ತವೆ.

ಶೇಖರಕಾಪೀಡ ಯೋಜನೆ ಎಂದರೆ ತುರುಬು ಕಟ್ಟುವ ಕಲೆ ಎಂದೂ ಕೆಲ ವ್ಯಾಖ್ಯಾನಕಾರರು ಅರ್ಥ ಮಾಡಿದ್ದಾರೆ.

## 16. ನೇಪಥ್ಯ ಪ್ರಯೋಗ

ನಾಟಕಗಳಲ್ಲಿ ಪರದೆಯ ಹಿಂದೆ ಅಥವ ನಾಟ್ಯರಂಗದ ಹಿಂದೆ ಪಾತ್ರಗಳು ವೇಷ ಭೂಷಣ ಅಲಂಕಾರಗಳನ್ನು ಧರಿಸುವ ಕ್ರಮಕ್ಕೆ ನೇಪಥ್ಯ ಯೋಜನೆ ಎಂದು ಕರೆಯುವರು. ಸಮಾಜ ಜೀವನದಲ್ಲಿ ಸಹ ನೇಪಥ್ಯ ಯೋಜನೆ ಉಂಟು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ತನ್ನ ವ್ಯಕ್ತಿತ್ವ, ಅಭಿರುಚಿ ಹಾಗೂ ಸಂಪ್ರದಾಯಗಳಿಗನುಗುಣವಾಗಿ ಉಡಿಗೆ ತೊಡುವುದು ಆಭರಣಗಳನ್ನು ಧರಿಸುವುದು, ದೇಹಕಾಂತಿಯನ್ನು ಹೆಚ್ಚಿಸುವಂಥ ಅಲಂಕರಣ ಸಾಧನಗಳನ್ನು ಬಳಸುವುದೂ ನೇಪಥ್ಯ ಯೋಜನೆಯಾಗಿದೆ. ಯಶೋಧರನು ಕಲಾತ್ಮಕವಾಗಿ ಬಟ್ಟೆತೊಡುವುದಷ್ಟೆ ನೇಪಥ್ಯ ಯೋಜನೆ ಎನ್ನುತ್ತಾನೆ.

ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ನೇಪಥ್ಯಯೋಜನೆ "ಆಹಾರ್ಯಾಭಿನಯ" ಎಂದು ಹೆಸರು. ಸ್ತ್ರೀ-ಪುರುಷ ವೇಷಧಾರಿಗಳು ಧರಿಸಬೇಕಾದ ಉಡಿಗೆ, ತೊಡಿಗೆ, ಭೂಷಣಾಲಂಕಾರಗಳನ್ನು ಭರತನಾಟ್ಯ ಶಾಸ್ತ್ರ ವಿವರಿಸಿದೆ.

## 17. ಕರ್ಣಪತ್ರ ಭಂಗ

ಆನೆಯ ದಂತ ಮತ್ತು ಶಂಖಗಳಿಂದ ಕರ್ಣಾಭರಣಗಳನ್ನು ರಚಿಸುವ ಕಲೆ ಇದು. ತಾಳೇಗರಿ, ಭೂರ್ಜಪತ್ರ ಮತ್ತು ಹೂ-ಚಿಗುರುಗಳಿಂದ ಕಿವಿಗಿಡುವ ವಿವಿಧ ಆಕಾರ-ರೂಪದ ಆಭರಣಗಳನ್ನು ರಚಿಸುವುದೂ ಸಹ ಕರ್ಣಪತ್ರಭಂಗ ಎನಿಸುವುದೆಂದು ಕೆಲ ಪಂಡಿತರೆನ್ನುತ್ತಾರೆ. ಹೂ-ಬಳ್ಳಿಗಳನ್ನು ಮೀನು, ಸರ್ಪಗಳನ್ನು ಉಂಗುರ, ಪದಕ ಮೊದಲಾದ ಆಕಾರಗಳಲ್ಲಿ ಮುಖದ ಗಾತ್ರ ಮತ್ತು ಕಿವಿಯ ಪ್ರಮಾಣಕ್ಕೆ ತಕ್ಕಹಾಗೆ ದಂತ-ಶಂಖಗಳಿಂದ ಆಭರಣ ಗಳನ್ನು ರಚಿಸುವ ಈ ಕಲೆ ಸಾಮಾನ್ಯವಾಗಿ ಕೆಲವರ ವೃತ್ತಿಯೂ ಆಗಿತ್ತು.

## 18. ಗಂಧಯುಕ್ತಿ

ಪರಿಮಳ ದ್ರವ್ಯ ಮತ್ತು ಅಂಗರಾಗಗಳನ್ನು ತಯಾರಿಸುವ ಕಲೆಯೆ ಗಂಧ ಯುಕ್ತಿ. ಪ್ರಾಚೀನ ಭಾರತೀಯರು ಪರಿಮಳ ದ್ರವ್ಯಗಳನ್ನು ಬಳಸುವುದರಲ್ಲಿ ತುಂಬ ಆಸಕ್ತರಾಗಿದ್ದರೆಂದು ತಿಳಿದುಬರುತ್ತದೆ. ಧೂಪ ಭೋಗ, ಸುಗಂಧ ಭೋಗಗಳು ನಾಗರಿಕ-ಶ್ರೀಮಂತ ಜೀವನದ ಅಂಗಗಳಾಗಿದ್ದವು. 'ಮಾನಸೋಲ್ಲಾಸ'ದಲ್ಲಿ ಸುಗಂಧ ಧೂಪ ಭೋಗಗಳನ್ನು ಕುರಿತ ವಿವರಣೆ ಇದ್ದರೆ, ವರಾಹಮಿಹಿರನ 'ಬೃಹತ್ ಸಂಹಿತೆ'ಯಲ್ಲಿ ಧೂಪ, ಅತ್ತರು, ಸುಗಂಧ ತೈಲ, ಪರಿಮಳ ಪೂರ್ಣವಾದ ಅಂಗರಾಗಗಳನ್ನು ತಯಾರಿಸುವ ವಿಸ್ತೃತವಾದ ವಿವರಣೆ ಇದೆ. ಭಾರತದಲ್ಲಿ ಒಂದು ಕಾಲಕ್ಕೆ 1,74,720 ರೀತಿಯ ಪರಿಮಳ ದ್ರವ್ಯಗಳನ್ನು ತಯಾರಿಸುತ್ತಿದ್ದ ವಿಧಿವಿಧಾನ ಗಳು ಲಭ್ಯವಿವೆ ಎಂದು ಈ ಕುರಿತು ಸಂಶೋಧನೆ ನಡೆಸಿರುವರೆನ್ನುತ್ತಾರೆ. ದೇವಾಗಾರಗಳಿಂದ ಶಯ್ಯಾಗಾರಗಳವರೆಗೆ ಬೇರೆ ಬೇರೆ ಋತುಗಳಲ್ಲಿ, ವಾತಾವರಣವನ್ನು ಆಹ್ಲಾದಕರವಾಗಿಡಲು ವಿವಿಧ ರೀತಿಯ ಧೂಪಗಳನ್ನೂ ಬಳಸಿದರೆ ಉಡಿಗೆಗಳು ಪರಿಮಳಯುಕ್ತವಾಗಿರುವಂತೆ ಮಾಡಲು ಅತ್ತರು ಗಳನ್ನೂ ಸ್ನಾನ ಕಾಲದಲ್ಲಿ ದೇಹ ಕಾಂತಿ ಬೆಳೆಸುವಂಥ ಸ್ನಾನ ಚೂರ್ಣಗಳನ್ನೂ ಅಲಂಕರಣಾರ್ಥವಾಗಿ ಕೇಶತೈಲ ಮತ್ತು ಅಂಗರಾಗಗಳನ್ನೂ ಧಾರಾಳವಾಗಿ ಬಳಸಲಾಗುತ್ತಿತ್ತು. ಎಲ್ಲ ವಿಧವಾದ ಪರಿಮಳ ದ್ರವ್ಯಗಳನ್ನೂ ಈ ದೇಶದಲ್ಲೇ ಬೆಳೆವ ಸಾವಿರಾರು ವನಸ್ಪತಿಗಳಿಂದಲೂ, ಮೃಗ-ಪಶು ಜನ್ಯ

(ಕಸ್ತೂರಿ-ಪುನಗು ಇತ್ಯಾದಿ) ವಸ್ತುಗಳಿಂದಲೂ ತಯಾರಿಸಲಾಗುತ್ತಿತ್ತು ಎಂಬುದು ಕುತೂಹಲಕಾರಿಯಾದ ಅನ್ವೇಷಣ ಯೋಗ್ಯವಾದ ಅಂಶ.

ವಿಷ್ಣುಧರ್ಮೋತ್ತರ ಪುರಾಣದಲ್ಲಿ ಸ್ನಾನಕ್ಕಾಗಿ, ಅಭ್ಯಂಜನಕ್ಕಾಗಿ ಸಿದ್ಧಪಡಿಸಿಕೊಳ್ಳುವ ಸುಗಂಧನೀರು, ಎಣ್ಣೆಯ ವಿವರಗಳು ಇಂತಿವೆ :

ಸ್ನಾನಕ್ಕೆ : ಬೇಲದ ಚಿಗುರು, ಬಿಲ್ವಪತ್ರೆ, ಸೇರಳೆ, ಸೀಮಾವು, ಸೀಬೆಗಿಡದ ಚಿಗುರನ್ನು ನೀರಿನಲ್ಲಿ ಹಾಕಿ ಶೋಧಿಸಿದ ನೀರು ಸ್ನಾನಕ್ಕೆ ಬಹಳ ಶ್ರೇಷ್ಠ.

ಅಭ್ಯಂಜನಕ್ಕೆ: ಜಾಯಿಕಾಯಿ, ಜಾಯಿಪತ್ರೆ, ಅಚ್ಚೆಳ್ಳು ಎಣ್ಣೆ, ಕುಂಕುಮ, ಕೇಸರಿ, ಮಾಚೀಪತ್ರೆ, ಶೈಲೇಯ, ತಗರ, ಕಾಷ್ಠ, ತಾಂಬೂಲ, ಜಟಾಮಾಂಸಿ, ಚಂಗಲಕೋಷ್ಠ ಈ ಪದಾರ್ಥಗಳ ಸಾರ ಸೇರಿದ ಎಣ್ಣೆಗೆ ಕಸ್ತೂರಿಯನ್ನು ಬೆರೆಸಿ ತಲೆಗೊತ್ತಿಕೊಂಡು ಅಭ್ಯಂಜನ ಸ್ನಾನ ಮಾಡಿದರೆ ಕಾಮೋತ್ತೇಜಕವಾಗುವುದು.

ಇದೇ ರೀತಿ ಧೂಪ, ಮುಖಗಂಧ ಮೊದಲಾದ ಯುಕ್ತಿಗಳೂ ವಿವರಿಸಲ್ಪಟ್ಟಿವೆ. ಅಭಿಲಷಿತಾರ್ಥ ಚಿಂತಾಮಣಿಯಲ್ಲಿ ಧೂಪಭೋಗ ಎಂಬ ಹೆಸರಿನ ಹಲವಾರು ಬಗೆಯ ಧೂಪಗಳನ್ನೂ, ವಿಲೇಪನಭೋಗ ವಿಭಾಗದಲ್ಲಿ ಮೈಗೆ ಪೂಸಿಕೊಳ್ಳುವ ಸುಗಂಧ ದ್ರವ್ಯಗಳನ್ನೂ ವಿವರಿಸಿದೆ.

## 19. ಭೂಷಣಯೋಜನೆ

ಭೂಷಣಯೋಜನೆ ಎಂದರೆ ಆಭರಣಗಳನ್ನು ತಯಾರಿಸುವುದು ಎಂದು ಗಂಗೂಲಿ ಅವರು ಅರ್ಥ ಮಾಡಿದ್ದಾರೆ. ಆದರೆ ಆಭರಣಗಳನ್ನು ತೊಡುವ ಕಲೆ - ಎಂಬುದೇ ಸರಿಯಾದ ಅರ್ಥ. ಅಲಂಕಾರ ಯೋಜನೆಗಳಲ್ಲಿ ಭೂಷಣ ಯೋಜನೆ ಒಂದು ಪ್ರಧಾನ ಅಂಶ. ಭೂಷಣಗಳನ್ನು ಯಶೋಧರ ಸಂಯೋಜ್ಯ, ಅಸಂಯೋಜ್ಯ ಎಂದು ಎರಡು ಬಗೆಯಾಗಿ ವಿಂಗಡಿಸಿದ್ದಾನೆ. ತಂತಿ ಅಥವಾ ದಾರಕ್ಕೆ ಮಣಿಗಳನ್ನು, ಬಂಗಾರದ ಗುಂಡು, ಹೂಗಳನ್ನು

ಪೋಣಿಸಿ ಮಾಡಿದ ಆಭರಣಗಳು ಸಂಯೋಜ್ಯ ಎನಿಸುತ್ತವೆ. ಚಿನ್ನವೇ ಮೊದಲಾದ ಲೋಹಗಳನ್ನು ಕರಗಿಸಿ ಅಚ್ಚು ಹೊಯ್ದು ಅಥವಾ ತಟ್ಟಿ ಗಟ್ಟಿಯ ರೂಪದಲ್ಲಿ ತಯಾರಿಸಿದ ಆಭರಣಗಳು ಅಸಂಯೋಜ್ಯ ಎನಿಸುತ್ತವೆ. ಮಣಿಹಾರ, ಕಂಠೀಹಾರಗಳು ಮೊದಲನೆ ಗುಂಪಿಗೂ, ಕಟಕ, ಕುಂಡಲಗಳು ಎರಡನೆಯ ಜಾತಿಗೂ ಸೇರುತ್ತವೆ.

ಮಹಿಳೆಯರು ಸ್ವಾಭಾವಿಕವಾಗಿಯೇ ಭೂಷಣಪ್ರಿಯರು. ಪೂರ್ವ ಕಾಲದಲ್ಲಿ ಗಂಡಸರೂ ಆಭರಣಗಳನ್ನು ತೊಡುತ್ತಿದ್ದರು. ನಮ್ಮ ದೇವ–ದೇವತೆಗಳೂ, ರಾಜ–ರಾಣಿಯರೂ ಅಪಾದಮಸ್ತಕ ವಜ್ರ ವೈಢೂರ್ಯಗಳಿಂದ ಕೂಡಿದ ಸ್ವರ್ಣಾಭರಣಗಳನ್ನು ತೊಡುತ್ತಿದ್ದರು. ದೇವತೆಗಳು ಮತ್ತು ರಾಜ–ರಾಣಿಯರು ಅವರವರ ಅಂತಸ್ತಿಗೆ ತಕ್ಕಹಾಗೆ ತೊಡುತ್ತಿದ್ದ ನೂರಾರು ಆಭರಣಗಳ ವೈವಿಧ್ಯ, ವೈಖರಿಗಳು ಶಿಲ್ಪ, ಚಿತ್ರ ಶಾಸ್ತ್ರಗಳಲ್ಲಿ ದೊರಕುತ್ತವೆ.

ಸಾಮಾನ್ಯ ನಾಗರಿಕ ಮಹಿಳೆ ಕಾಲ್ಬೆರಳಿಗೆ ಉಂಗುರ, ಕಾಲ್ಗಡಗ ಮತ್ತು ರುಳಿಗಳನ್ನು ಧರಿಸುತ್ತಿದ್ದಳು. ಸೊಂಟಕ್ಕೆ ಡಾಬು, ಕೈಬೆರಳುಗಳಿಗೆ ಉಂಗುರಗಳು, ಮುಂಗೈಗೆ ಬಳೆ, ತೋಳಿಗೆ ತೋಳ್ಬಂದಿ, ಕತ್ತಿನಲ್ಲಿ ಹಾರಗಳು, ಮೂಗಿಗೆ ನತ್ತು, ಮುರಗಳು, ಕಿವಿಗೆ ಕುಂಡಲ, ತಲೆಯಲ್ಲಿ ನಾಗರ, ರಾಗಟೆ, ಬಿಲ್ಲೆ, ಜಡೆಗೆ ಕುಚ್ಚು ಮುಂತಾದವುಗಳನ್ನು ಧರಿಸುತ್ತಿದ್ದಳು. ಶ್ರೀಮಂತ ಮಹಿಳೆಯರು ಮೇಲಿನ ಒಂದೊಂದು ಆಭರಣದ ಜೊತೆಗೂ ಎರಡೂ–ಮೂರನ್ನು ಸೇರಿಸಿ ಧರಿಸುತ್ತಿದ್ದರು.

ಪುರುಷರು ಕೈಗೆ ತೋಡಾ, ಕಡಗಗಳನ್ನೂ, ಕಿವಿಗೆ ಕುಂಡಲಗಳನ್ನೂ, ಕಂಠದಲ್ಲಿ ಮಣಿ ಸ್ವರ್ಣಹಾರಗಳನ್ನೂ, ಬೆರಳಲ್ಲಿ ಉಂಗುರಗಳನ್ನೂ, ಸೊಂಟದಲ್ಲಿ ಚಿನ್ನ–ಬೆಳ್ಳಿಯ ಉಡದಾರಗಳನ್ನೂ ಧರಿಸುತ್ತಿದ್ದರು,

ಶ್ರೀಮಂತರು ಚಿನ್ನ ವಜ್ರಾದಿಗಳಿಂದ ಮಾಡಿದ ಆಭರಣಗಳನ್ನು ಧರಿಸಿದರೆ ಸಾಮಾನ್ಯರು ಬೆಳ್ಳಿ, ತಾಮ್ರ, ಕಬ್ಬಿಣ, ದಂತ, ಶಂಖ, ಗಾಜು, ಬಿದುರು, ಕವಡೆಗಳಿಂದ ಮಾಡಿದ ಆಭರಣಗಳನ್ನು ಧರಿಸುತ್ತಿದ್ದರು.

## 20. ಇಂದ್ರಜಾಲ

ಭಯ, ಆಶ್ಚರ್ಯಗಳು ಮೂಡುವಂತೆ, ನೋಡುವವರಿಗೆ ಭ್ರಮೆ ಮೂಡಿಸುವಂತೆ ಮಾಡುವ ವಿದ್ಯೆ ಇಂದ್ರಜಾಲ. ಇದನ್ನು ಕಣ್ಣುಕಟ್ಟು, ಕೈಚಳಕ, ಯಕ್ಷಿಣಿ ವಿದ್ಯೆ ಎಂದೆಲ್ಲ ಕರೆಯುತ್ತಾರೆ. ಒಣ ನೆಲದ ಮೇಲೆ ಖಾಲಿ ಬುಟ್ಟಿಯನ್ನೋ ಡಬ್ಬಿಯನ್ನೊ ಬೋರಲು ಹಾಕಿ, ಮಂತ್ರದಂಡದಿಂದ ಅದನ್ನು ಸುತ್ತಿ ಆ ಬುಟ್ಟಿ ಎತ್ತಿದರೆ ಅದರ ಕೆಳಗೊಂದು ಮಾವಿನಗಿಡ ಹುಟ್ಟಿರುತ್ತದೆ. ಆರೋಗ್ಯ ದೃಢಕಾಯನಾದ ಪ್ರೇಕ್ಷಕನನ್ನು ಮಲಗಿಸಿ, ಮುಸುಕುಹಾಕಿ ಹೊದಿಸಿ ಚೂರಿಯಿಂದ ಇರಿದು ರಕ್ತಹರಿಸಿದ ಮೇಲೆ, ಹೊದಿಗೆ ತೆಗೆದರೆ ಅವನ ಮೈಕೂದಲಿಗೂ ಅಪಾಯವಾಗಿರುವುದಿಲ್ಲ. ಇಂಥ ಕಣ್ಕಟ್ಟಿನ ಆಟಗಳನ್ನು ಆಡಿ ತೋರಿಸುವ ಹಾವಾಡಿಗರನ್ನು ಇಂದಿಗೂ ನಮ್ಮಲ್ಲಿ ಕಾಣಬಹುದು. ಇದು ಮಂತ್ರಸಿದ್ಧಿಯಿಂದ ಲಭ್ಯವಾಗುವ ವಿದ್ಯೆ ಎಂಬ ನಂಬಿಕೆಯೂ ಉಂಟು. ಭಾರತದಲ್ಲಿ ಪ್ರಚಲಿತವಿದ್ದಿತೆಂದು ಹೇಳಲಾದ ರಜ್ಜುತಂತ್ರ ದೇಶ ವಿದೇಶಗಳಲ್ಲಿ ಕುತೂಹಲ ಕೆರಳಿಸಿರುವ ಜಾದೂ ವಿದ್ಯೆ. ದಶಕುಮಾರ ಚರಿತೆಯಲ್ಲಿ ವಿದ್ಯೇಶ್ವರನೆಂಬ ಯಕ್ಷಿಣಿವಿದ್ಯಾನಿಪುಣ ನೀಡಿದ ರೋಮಾಂಚಕ ಪ್ರದರ್ಶನದ ವಿವರಣೆ ಇದೆ. ಈ ವಿದ್ಯಾ ರಹಸ್ಯವನ್ನು ಬೋಧಿಸುವ ಇಂದ್ರಜಾಲತಂತ್ರ ಎಂಬ ಗ್ರಂಥ ಉಂಟೆಂದು ಹೇಳಲಾಗಿದೆ.

## 21. ಕೌಚುಮಾರಯೋಗ

ಕೌಚುಮಾರಯೋಗ ಅಥವಾ ಕುಚಪೂರಯೋಗ ಎಂಬುದು ಕುಚುಮಾರನೆಂಬ ಋಷಿಯಿಂದ ಪ್ರಚಲಿತವಾದ ವಿದ್ಯೆಯಾದುದರಿಂದ ಈ ಹೆಸರು ಬಂದಿದೆ ಎಂದು ಪಂಡಿತರ ಅಭಿಪ್ರಾಯ. ಇದನ್ನು ಸುಭಗಂಕರಣ ಯೋಗವೆಂದೂ ಕರೆಯುತ್ತಾರೆ. ಕಾಮಶಾಸ್ತ್ರದ ಔಪನಿಷಧಿಕ ಅಧಿಕರಣದಲ್ಲಿನ ಪ್ರಯೋಗಗಳೆಲ್ಲ ಕುಚುಮಾರ ಪ್ರಣೀತವೆಂದೇ ಹೇಳವಾಗಿದೆ. ಈ ಹಿಂದೆ ವಿವರಿಸಿರುವ ಚಿತ್ರಾಶ್ವಯೋಗ (13)ಕ್ಕೂ ಇದಕ್ಕೂ ಹೆಚ್ಚಿನ ಅಂತರವೇನೂ ಇಲ್ಲ. ಕುರೂಪಿಯನ್ನು ಸ್ಫುರದ್ರೂಪಿಯಾಗಿಯೂ, ಸ್ಫುರದ್ರೂಪಿಯನ್ನು ಕುರೂಪಿಯನ್ನಾಗಿಯೂ ಕಾಣುವಂತೆ ಮಾಡುವುದು; ವಶೀಕರಣ ವಿದ್ಯೆ;

ಮುಪ್ಪಿನಿಂದ ಉಂಟಾಗುವ ಮುಖದ ಸುಕ್ಕು, ಬಿಳಿಯ ಕೂದಲುಗಳನ್ನು ನಿವಾರಿಸಿಕೊಳ್ಳುವುದು ಮುಂತಾದುವೆಲ್ಲ ಕೌಚುಮಾರಯೋಗವೆನಿಸುತ್ತವೆ. ಸ್ವಾಭಾವಿಕವಾದ ರೀತಿಯಲ್ಲಿ ಸಾಧಿಸಲಾಗದ ಕೆಲಸಗಳನ್ನು ಮೂಲಿಕೆ, ಅಂಜನ, ಮಂತ್ರಗಳ ಸಹಾಯದಿಂದ ಸಾಧಿಸುವ ಕಲೆ ಇದು.

## 22. ಹಸ್ತಲಾಘವ

ಪರಸ್ಪರ ಭೇಟಿಯಾದಾಗ ಕೈಕುಲುಕುವ ಪದ್ಧತಿಯನ್ನು ಹಸ್ತಲಾಘವ ಎಂದು ಕರೆಯುವುದು ತಪ್ಪು ಪ್ರಯೋಗ. ಹಸ್ತಲಾಘವ ಎಂದರೆ ಕೈಕುಲುಕುವುದಲ್ಲ ಕೈಚಳಕ ತೋರುವುದು. ನೋಡು ನೋಡುತ್ತಿದ್ದ ಹಾಗೆಯೇ ವಸ್ತುವನ್ನು ಅಪಹರಿಸುವುದು-ಎಂದು ಭಾಸ್ಕರ ನರಸಿಂಹ ಅರ್ಥ ಮಾಡಿದ್ದಾರೆ. ಡಾ॥ ವೆಂಕಟಸುಬ್ಬಯ್ಯ ಇದು ತಪ್ಪು ವಿವರಣೆ ಎಂದಿದ್ದಾರೆ. ಇಂದ್ರಜಾಲ ನಿಪುಣರು ಈ ಕಲೆಯನ್ನು ಪ್ರದರ್ಶಿಸುತ್ತಾರಾದರೂ ಇದು ಇಂದ್ರಜಾಲವಲ್ಲ. ನಿದರ್ಶನಗಳ ಮೂಲಕ ಇದು ಏನೆಂದು ವಿವರಿಸುವುದೇ ಸೂಕ್ತ: ಪ್ರೇಕ್ಷಕರೊಬ್ಬರು ನೋಡಿ ನೆನಪಿಟ್ಟುಕೊಂಡ ಇಸ್ಪೇಟ್ ಎಲೆಯನ್ನು ತಾನು ನೋಡದೆಯೇ ಉಳಿದ ಎಲೆಗಳೊಂದಿಗೆ ಕಲೆಸಿದ ಮೇಲೆ ಅವರು ಗುರುತಿಸಿಟ್ಟುಕೊಂಡಿದ್ದ ಎಲೆಯನ್ನು ತೆಗೆದುಕೊಡುವುದನ್ನು ಅನೇಕರು ನೋಡಿರಬಹುದು. ಇದು ಹಸ್ತಲಾಘವ. ಅಂಗೈಯಲ್ಲಿಟ್ಟ ರೂಪಾಯಿಯನ್ನು ಮುಷ್ಟಿಯಲ್ಲಿ ಮುಚ್ಚಿ, ಕೈ ಬಿಚ್ಚಿದಾಗ ರೂಪಾಯಿ ಮಾಯವಾಗಿರುತ್ತದೆ. ಇಂಥ ಕೈಚಳಕವನ್ನು ತೋರಿಸುವುದೇ ಹಸ್ತಲಾಘವ ಕಲೆ.

## 23. ವಿಚಿತ್ರಶಾಕಯೂಷಭಕ್ಷ್ಯವಿಕಾರಕ್ರಿಯಾ

ವಿಚಿತ್ರಶಾಕಯೂಷಭಕ್ಷ್ಯವಿಕಾರಕ್ರಿಯಾ ಎನ್ನುವುದು ಪಾಕಶಾಸ್ತ್ರಕ್ಕೆ ಸಂಬಂಧಿಸಿದ ವಿದ್ಯೆ, ಶ್ರೀಧರ ಗೋಸ್ವಾಮಿ ಅವರು ಇದನ್ನು ಚಿತ್ರಶಾಕಾ ಪೂಪ ಭಕ್ಷ್ಯವಿಕಾರಕ್ರಿಯಾ ಎಂದು ಕರೆದಿದ್ದಾರೆ. ಹಸಿರು ತರಕಾರಿಗಳಿಂದ ಪಲ್ಯ, ತಪ್ಪೆ ಮುಂತಾದವುಗಳನ್ನು ಮಾಡುವುದು, ಸಾರು ಹುಳಿಗಳನ್ನೂ ಲಡ್ಡು ಮುಂತಾದ ಸಿಹಿ ತಿಂಡಿಗಳನ್ನೂ ವಡೆ ಗಾರಿಗೆ ಮೊದಲಾದ ಕರಿದ ಪದಾರ್ಥಗಳನ್ನೂ ಸಿದ್ಧ ಪಡಿಸುವ ಕಲೆ ಇದು.

ಬೇಯಿಸಿ ಮಾಡುವ ಭೋಜ್ಯ ವಸ್ತುಗಳು ಐದು ವಿಧ. ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ, ಪಾನೀಯ ಎಂದು. ಅಗಿದು ತಿನ್ನುವಂಥ ಕರಿದ ಅಥವ ಬೇಯಿಸಿದ ಪದಾರ್ಥಗಳು ಭಕ್ಷ್ಯಗಳು. ಉದಾ : ಹೋಳಿಗೆ, ಲಡ್ಡು, ಚಿರೋಟಿ ಇತ್ಯಾದಿ. ಅನ್ನ ಮತ್ತು ಅದರಿಂದ ತಯಾರಿಸಿದ ವಿವಿಧ ಪದಾರ್ಥ ಗಳು ಭೋಜ್ಯ. ಮುದ್ದೆಯಂಥ ಮೃದುವಾದ ಉಂಡೆ ಮಾಡುವಂಥ ಪದಾರ್ಥಗಳು ಲೇಹ್ಯಗಳು ಗೊಜ್ಜಿನಂಥ ವ್ಯಂಜನಗಳು. ಚೋಷ್ಯಗಳು. ಕೀರು, ಸಾರು ಮೊದಲಾದವುಗಳು ಪಾನೀಯಗಳು. ಈ ಒಂದೊಂದು ವಿಭಾಗ ದಲ್ಲೂ ಹಲವು ವಿಧವಾದ ರುಚಿ ಬಣ್ಣಗಳ ಅಡಿಗೆ ಮಾಡುವುದು ಅಪೂರ್ವಕಲೆ ಎಂದೇ ಪರಿಗಣಿಸಲಾಗಿತ್ತು.

ಭೋಜನವನ್ನು ಒಂದು ಭೋಗವಾಗಿ (ಅನ್ನಭೋಗ) ಪರಿಗಣಿಸಿದ್ದ ಪ್ರಾಚೀನ ಭಾರತದಲ್ಲಿ ಅಡಿಗೆಯನ್ನು ಕಲೆಯಾಗಿ ಕಲಿಯುತ್ತಿದ್ದದು ಅಚ್ಚರಿ ಯೇನಲ್ಲ. ನಳ-ಭೀಮಸೇನರು ಪಾಕವಿದ್ಯಾ ಪ್ರವೀಣರಾಗಿದ್ದು. ಅವರ ಹೆಸರುಗಳಲ್ಲಿ ಪಾಕಶಾಸ್ತ್ರಗಳೇ ರಚಿತವಾಗಿವೆ. ಕನ್ನಡದಲ್ಲಿ ಮಂಗರಸನೆಂಬ ಕವಿ ರಚಿಸಿದ 'ಸೂಪಶಾಸ್ತ್ರ' ಉಂಟು. ಕೇವಲ ರುಚಿಯಾಗಿ ಅಡಿಗೆ ಮಾಡುವುದಷ್ಟೇ ಪಾಕಕಲೆಯಲ್ಲ. ಅಡಿಗೆಗೆ ಬಳಸುವ ಪದಾರ್ಥಗಳ ಸೂಕ್ಷ್ಮ ಜ್ಞಾನ ಮತ್ತು ಅತ್ಯಲ್ಪ ಸಾಧನ ಸಲಕರಣೆಗಳಿಂದ ಅತಿರುಚಿಯಾದ ಅಡಿಗೆ ಮಾಡುವುದು ಸಹ ಈ ಶಾಸ್ತ್ರಕ್ಕೆ ಸಂಬಂಧಿಸಿದ್ದೇ ಆಗಿದೆ. ಬೇತಾಳ ಪಂಚ ವಿಂಶತಿಯಲ್ಲಿರುವ ಈ ಕುರಿತಾದ ಕತೆಯೊಂದು ಸ್ವಾರಸ್ಯವಾಗಿದೆ.

ಭೋಜನ ವಿಜ್ಞಾನದಲ್ಲಿ ಮಹಾ ಪರಿಣತನಾದವನೊಬ್ಬನನ್ನು ಪರೀಕ್ಷಿಸ ಲೆಂದು ದೊರೆಯೊಬ್ಬ ತನ್ನ ಅರಮನೆಗೆ ಭೋಜನಕ್ಕೆ ಆಹ್ವಾನಿಸಿದ. ತನ್ನ ರಾಜ್ಯದಲ್ಲಿ ಬೆಳೆವ ಅತಿ ಶ್ರೇಷ್ಠವರ್ಗದ ಅಕ್ಕಿಯನ್ನು ಇನ್ನಿತರ ಸಾಧನ ಗಳನ್ನೂ ತರಿಸಿ ಪಾಕವಿದ್ಯಾ ನಿಪುಣರಿಂದ ಅಡಿಗೆ ಮಾಡಿಸಿದ. ತನ್ನ ಜೊತೆ ಯಲ್ಲಿಯೇ ತನ್ನ ಅತಿಥಿಗೂ ಬೆಳ್ಳಿಯ ತಟ್ಟೆ, ಚಿನ್ನದ ಬಟ್ಟಲುಗಳನ್ನಿಡಿಸಿ ಊಟಕ್ಕೆ ಕುಳಿತುಕೊಂಡ. ಮೊದಲ ತುತ್ತನ್ನು ಬಾಯಲಿಟ್ಟ ದೊರೆ ಅಂಥ ಅಪೂರ್ವ ಭೋಜನವನ್ನು ಮೊದಲಸಾರಿ ರುಚಿ ನೋಡುತ್ತಿರುವ ಮಗುವಿ ನಂತೆ ಬಾಯಿ ಚಪ್ಪರಿಸಿ, ಅಡಿಗೆಯವನ ಕೈಗೆ ತೋಡಾ ಹಾಕಿಸಬೇಕೆಂದು ಚಿಂತಿಸುತ್ತಿದ್ದಾಗ, ಪಕ್ಕದಲ್ಲಿ ಕುಳಿತಿದ್ದ ಭೋಜನ ವಿಜ್ಞಾನಿ ಮೊದಲ

ತುತ್ತನ್ನು ಮೂಸಿನೋಡಿ ಮುಖ ಸೊಟ್ಟಗೆ ಮಾಡಿಕೊಂಡು ಕುಳಿತಿದ್ದ. ದೊರೆ ಆಶ್ಚರಿಯಿಂದ ಅವನನ್ನು ಕೇಳಿದ : "ಏಕೆ ಮಿತ್ರ, ಏನಾಗಿದೆ ?" ಎಂದು. "ಅನ್ನ ಮಾಡಿರುವ ಈ ಅಕ್ಕಿ ಒಳ್ಳೆಯದಲ್ಲ ; ಕೆಟ್ಟವಾಸನೆ ಬರುತ್ತಿದೆ" ಎಂದ ಆ ಭೋಜನ ವಿಜ್ಞಾನಿ. ತನಗೇನೂ ವಾಸನೆ ಬರದಿದ್ದರೂ ಅವನ ಮಾತಿನ ಸತ್ಯತೆ ಪರಿಶೀಲಿಸಲು ದೊರೆ ತನಿಖೆಗೆ ಆಜ್ಞೆ ಮಾಡಿದ. ಫಲಿತಾಂಶವಾಗಿ ಅನ್ನ ಮಾಡಿದ್ದ ಅಕ್ಕಿ ಸ್ಮಶಾನ ಪ್ರದೇಶದಲ್ಲಿದ್ದ ಭತ್ತದ್ದೆಂದು ತಿಳಿದು ಬಂದಿತು.

ಇಂಗು, ತೆಂಗು ಇದ್ದರೆ ಮಂಗನೂ ಅಡಿಗೆ ಮಾಡುತ್ತೆ ಎಂಬ ಗಾದೆ ಉಂಟಷ್ಟೆ. ಹಿತಮಿತವಾಗಿ ಇಂಗು, ತೆಂಗುಗಳನ್ನು ಬಳಸುವುದನ್ನು ಬಲ್ಲವರು ರುಚಿಯಾಗಿ ಅಡಿಗೆ ಮಾಡಬಲ್ಲರೆಂಬುದು ನಿಜ. ಆದರೆ ಕೇವಲ ಒಬ್ಬರು ತಿನ್ನುವಷ್ಟು ಅನ್ನಕ್ಕೆ ಸಾಕಾದ ಭತ್ತದಿಂದ ಸ್ವಾದುವಾದ ಎಲ್ಲ ವ್ಯಂಜನಗಳನ್ನೂ ಒಳಗೊಂಡ ಭೋಜನವನ್ನು ಸಿದ್ಧಪಡಿಸಿದ ಚತುರೆಯೊಬ್ಬಳ ಕತೆಯೊಂದು ದಶಕುಮಾರ ಚರಿತೆಯಲ್ಲಿದೆ. ಇಂಥ ಕತೆಗಳು ಪಾಕಶಾಸ್ತ್ರಕ್ಕೆ ನಮ್ಮಲ್ಲಿದ್ದ ಪ್ರಾಶಸ್ತ್ಯವನ್ನು ಸೂಚಿಸುತ್ತದೆ.

## 24. ಪಾನಕರಸರಾಗಾಸವ ಯೋಜನಾ

ಪಾನಕರಸರಾಗಾಸವ ಯೋಜನೆ-ಪಾಕಶಾಸ್ತ್ರದ ಮತ್ತೊಂದು ಅಂಗ. ಅಗ್ನಿಸಂಸ್ಕಾರವಿಲ್ಲದೆ ತಯಾರಿಸುವ ಪಾನೀಯಗಳಿಗೆ ಸಂಬಂಧಿಸಿದ ವಿದ್ಯೆ ಇದು. ಇಲ್ಲಿ ಪಾನಕ, ರಸ, ರಾಗ, ಆಸವ ಎಂಬ ನಾಲ್ಕು ವಿಧಗಳು ಸೂಚಿಸಲ್ಪಟ್ಟಿವೆ. ಈ ಪಾನೀಯಗಳಲ್ಲಿ 1. ಹುದುಗೆಬ್ಬಿಸಿದ್ದು 2. ಹುದಿಗಿಲ್ಲದ್ದು ಎಂದು ಎರಡುವಿಧ. ಎರಡನೆಯದರಲ್ಲಿ ನೀರಿನಲ್ಲಿ ಕರಗಿಸಿ ಮಾಡಿದ್ದು, ಕರಗಿಸದೆ ಮಾಡಿದ್ದು ಎಂದು ಎರಡು ವಿಧ, ಸಕ್ಕರೆಯ ಪಾನಕ ಮೊದಲನೆಯದಕ್ಕೆ, ಹಣ್ಣಿನ ರಸ ಮತ್ತು ಹಣ್ಣು-ಬೆಲ್ಲ ರುಬ್ಬಿ ಶೋಧಿಸಿದ್ದು ಎರಡನೆಯದಕ್ಕೆ ಉದಾಹರಣೆ. ಮೊದಲನೆಯದು ಪಾನಕ, ಎರಡನೆಯದು ರಸ.

ರಾಗ ಎಂಬುದು ಪೂರ್ಣವಾಗಿ ದ್ರವವೂ ಅಲ್ಲದ, ಘನೀ ಭೂತವೂ ಅಲ್ಲದ ವ್ಯಂಜನಗಳ ಜಾತಿಯ ಭೋಜ್ಯವಸ್ತು. ಈ ಹಿಂದಿನ ಶಾಕಾಪೂಪಗಳ

ವಿವರಣೆಯಲ್ಲಿ ಹೇಳಿದ "ಲೇಹ್ಯ" ಎಂಬ ಬಗೆಯ ವ್ಯಂಜನಕ್ಕೂ ಇದಕ್ಕೂ ಹೆಚ್ಚಿನ ಅಂತರವೇನಿಲ್ಲ, ರಾಗ ಎಂದರೆ ಆಕರ್ಷಣೆ, ಪ್ರೀತಿ, ಬಣ್ಣ ಎಂದೆಲ್ಲ ಅರ್ಥವಾಗುತ್ತದೆ. ಕಣ್ಣಿಗೆ ಹಿತವಾದ ಬಣ್ಣದಿಂದ ಊಟವನ್ನು ಆಕರ್ಷಣೀಯವಾಗಿ ಪ್ರೀತಿಸುವಂತೆ ಮಾಡಬಲ್ಲ ವ್ಯಂಜನಗಳಿಗೆ ರಾಗಗಳೆಂದು ಹೆಸರು. ಲವಣಾಮ್ಲಕಟುಮಧುರವಾದ ಭೋಜ್ಯವಸ್ತುಗಳೆಂದು ಯಶೋಧರ ಬಣ್ಣಿಸಿರುವ ಈ ರಾಗಗಳಲ್ಲಿ 1. ಲೇಹ್ಯ 2. ದ್ರವ 3. ಚೂರ್ಣ ಎಂದು ಮೂರು ಬಗೆ. ಉಪ್ಪಿನಕಾಯಿ, ಚಟ್ನಿ, ಸಾಂದ್ರವಾದ ಫಲರಸಗಳು (ಸಾಸ್ ಜಾಂ, ಜೆಲ್ಲಿ ಇತ್ಯಾದಿ) ಲೇಹ್ಯಗಳು. ಲೇಹ್ಯಕ್ಕೆ ನೀರು ಅಥವ ರಸ ಸೇರಿದಾಗ ಎರಡನೆಯದಾದ 'ದ್ರವ', ಗೊಜ್ಜು, ಬಜ್ಜಿ ಮುಂತಾದವು. ಚಟ್ನಿಪುಡಿ ಯಂತಹವು ಮೂರನೆ ವರ್ಗಕ್ಕೆ ಸೇರುತ್ತವೆ.

ಈ ವಿಭಾಗದಲ್ಲಿ ನಾಲ್ಕನೆಯದಾದ ಆಸವ ಎನ್ನುವುದು ಮಧ್ಯದ ಒಂದು ರೂಪ. ಅತ್ಯಲ್ಪಾಂಶ ಮದ್ಯಸಾರವಿರುವ ಹುದುಗಿಸಿ, ಬಟ್ಟಿ ಇಳಿಸುವ ಮೂಲಕ ಮೂಲಿಕೆ, ಹಣ್ಣು ಮುಂತಾದವುಗಳಿಂದ ತಯಾರಿಸುವ ದ್ರವ ಪದಾರ್ಥ. ಹಿತ-ಮಿತವಾಗಿ ಆಸವಗಳನ್ನು ಬಳಸುವುದರಿಂದ ಹಸಿವು, ಜೀರ್ಣಶಕ್ತಿ ಹೆಚ್ಚುವುದು.

## 25. ಸೂಚೀವಾನಕರ್ಮ

'ವಾನ' ಎಂದರೆ ಹೊಲಿಯುವುದು, ನೇಯುವುದು ಎಂದರ್ಥ, ಸೂಚೀವಾನಕರ್ಮ ಎಂದರೆ ಸೂಜಿಯಿಂದ ಹೊಲಿಯುವುದು ಅಥವ ನೇಯುವುದು. ತೊಡಲಿಕ್ಕಾಗಿ ಬಟ್ಟೆಯನ್ನು ದೇಹದ ಅಳತೆ, ಆಕಾರಕ್ಕೆ ಕತ್ತರಿಸಿ, ಕತ್ತರಿಸಿದ ತುಂಡುಗಳನ್ನು ಮತ್ತೆ ಸೇರಿಸಿ ಹೊಲಿಯುವುದು. ಹರಿದ ಬಟ್ಟೆಯನ್ನು ಎಳೆತುಂಬಿ ಸರಿಪಡಿಸುವುದು (ಡಾರ್ನಿಂಗ್) ಅಥವ ಬಣ್ಣದ ದಾರಗಳಿಂದ ಎಳೆತುಂಬಿ ಅಂಚು-ಸೆರಗುಗಳನ್ನು ಅಲಂಕರಿಸುವುದು. ಕಸೂತಿ ಹಾಕುವುದು ಹೆಣೆಯುವುದು ಮೊದಲಾದುವೆಲ್ಲ ಸೂಚೀವಾನಕರ್ಮ ಎನಿಸುವುದು.

## 26. ಸೂತ್ರಕ್ರೀಡಾ

ಈ ಕಲೆಯ ಬಗ್ಗೆ ಅರ್ಥಾತ್ ಈ ಶಬ್ದಾರ್ಥದ ಬಗ್ಗೆ ಪಂಡಿತರಲ್ಲಿ ಭಿನ್ನಾಭಿಪ್ರಾಯವಿದೆ. ದಾರದ ಎಳೆಗಳಿಂದ ಜಾದೂಮಾಡುವ ಕಲೆ ಎಂದು

ಕೆಲವರು ಅರ್ಥಮಾಡಿದ್ದಾರೆ. ಕೊಳವೆಯೊಂದರೊಳಕ್ಕೆ ಒಂದು ಕಡೆಯಿಂದ ಒಂದು ಬಣ್ಣದ ದಾರವನ್ನು ಹುಗಿಸಿ ಇನ್ನೊಂದು ಕಡೆಯಿಂದ ಬೇರೆ ಬಣ್ಣದಲ್ಲಿ ಅದನ್ನು ಹೊರಕ್ಕೆ ತೆಗೆಯುವುದು. ಬಿಳಿಯದಾರವನ್ನು ಬಾಯಲ್ಲಿ ನುಂಗಿ ಬಣ್ಣದ ದಾರವನ್ನು ಹೊರಕ್ಕೆ ತೆಗೆಯುವುದು. ತುಂಡು ದಾರಗಳನ್ನು ಗಂಟುಗಳಿಲ್ಲದೆ ಒಂದೇ ಎಳೆಯಾಗಿ ತೋರುವುದು, ದಾರವನ್ನು ಸುಟ್ಟು ಬೂದಿಮಾಡಿ ಆ ಬೂದಿಯಿಂದ ದಾರವನ್ನು ಮಾಡುವುದು-ಇತ್ಯಾದಿ ಕೈಚಳಕವನ್ನು ಪ್ರದರ್ಶಿಸುವುದೇ ಸೂತ್ರಕ್ರೀಡಾ ಎಂದು ಕೆಲವರಮತ.

ಜೀವಗೋಸ್ವಾಮಿ, ಭಾಸ್ಕರ ನರಸಿಂಹ, ಗಿರಿಧರ ಮುಂತಾದವರು ಸೂತ್ರಗಳಿಂದ ಗೊಂಬೆಗಳನ್ನಾಡಿಸುವ ಕಲೆ ಎಂದಿದ್ದಾರೆ. ದಾರದಿಂದ ಕೃತಕ ಹೂಗಳನ್ನು ಮಾಡುವುದು ಎಂದು ಮಿತ್ರ ಅವರು ಅರ್ಥ ಹೇಳುತ್ತಾರೆ. ಇವುಗಳಲ್ಲಿ ಮೊದಲನೆಯದು 'ಹಸ್ತಲಾಘವ' ಕಲೆಯ ಒಂದು ವಿಧಾನವೂ, ಮೂರನೆಯದು 'ಸೂಚೀವಾನಕರ್ಮ'ದ ಒಂದು ಬಗೆಯೂ ಆಗುವುದರಿಂದ ಸೂತ್ರದ ಗೊಂಬೆ ಆಟ ಎಂಬುದೇ ಉಚಿತ ಎಂದೆನಿಸುತ್ತದೆ.

### 27. ವೀಣಾಡಮರುಕ ವಾದ್ಯಾನಿ

ವಾದ್ಯಗಳನ್ನೇ ಕುರಿತು ಒಂದು 'ಕಲೆ' ಇರುವಾಗ ಜಲತರಂಗ (11), ಮತ್ತು ವೀಣಾಡಮರುಕಗಳನ್ನು ಪ್ರತ್ಯೇಕವಾಗಿ ವಿಭಜಿಸುವುದು ಕುತೂಹಲದ ಅಂಶ. ಭಾರತೀಯ ವಾದ್ಯಗಳಲ್ಲಿ ವೀಣೆ ಮತ್ತು ಡಮರುಗಳಿಗೆ ವಿಶೇಷ ಸ್ಥಾನ ಉಂಟು. ವೀಣೆ ಸರ್ವ ವಿದ್ಯಾದಾಯಿನಿಯಾದ ಸರಸ್ವತಿಯ ವಾದ್ಯವಾದರೆ, ಡಮರು ನೃತ್ಯವಿದ್ಯಾಜನಕನಾದ ಪರಶಿವನ ವಾದ್ಯ.

ಭಾರತೀಯ ವಾದ್ಯಗಳಲ್ಲಿ ವೀಣೆಗೆ ಅಗ್ರಸ್ಥಾನವಿದೆ. ವಾದ್ಯತ್ರಯಗಳಲ್ಲಿ ಇದು ಮೊದಲನೆಯದು. ವೀಣೆಯ ದರ್ಶನವೇ ಪಾಪಹರವೆಂದು ಸಂಗೀತ ಶಾಸ್ತ್ರ ಪ್ರವರ್ತಕರಲ್ಲೊಬ್ಬನಾದ ಸೋಮನಾಥನೆನ್ನುತ್ತಾನೆ.

ಭಾರತೀಯ ಸಂಗೀತದ ಅತ್ಯಂತ ಸೂಕ್ಷ್ಮವಾದ ಸ್ವರ, ರಾಗ, ಧ್ವನಿ ತರಂಗಗಳನ್ನು ಈ ವಾದ್ಯದಷ್ಟು ಸ್ಪಷ್ಟವಾಗಿ, ಸ್ಫುಟವಾಗಿ, ನವಿರಾಗಿ

ಇಂಪಾಗಿ ನುಡಿಸಬಲ್ಲ ವಾದ್ಯ ಇದೊಂದೇ ಎಂದರೆ ಅತಿಶಯೋಕ್ತಿಯಲ್ಲ. ಪ್ರಾಚೀನ ಸಂಗೀತ ಶಾಸ್ತ್ರ ಗ್ರಂಥಗಳಲ್ಲಿ ಹಲವು ವಿಧವಾದ ವೀಣೆಗಳನ್ನು ಕುರಿತ ವಿವರಗಳಿವೆ.

ದೇವತೆಗಳಲ್ಲಿ ವಿಶ್ವಾವಸುವಿನ ವೀಣೆಗೆ ಬೃಹತೀ ಎಂದೂ, ತುಂಬುರನ ವೀಣೆಗೆ ಕಲಾವತೀ ಎಂದೂ, ನಾರದನ ವೀಣೆಗೆ ಮಹತೀ ಎಂದೂ, ಸರಸ್ವತಿಯ ವೀಣೆಗೆ ಕಚ್ಛಪೀ ಎಂದೂ, ಹೆಸರಿರುವುದಾಗಿ ಪುರಾಣಗಳಿಂದ ತಿಳಿದು ಬರುತ್ತದೆ.

ಶಾರ್ಙ್ಗದೇವನು ವೀಣೆಗಳಲ್ಲಿ ನಕುಲ, ಚಿತ್ರ, ವಿಪಂಚಿ, ಕೋಕಿಲಾ, ಆಲಾಪಿನೀ, ಕಿನ್ನರಿ, ಪಿನಾಕಿನಿ ಮತ್ತು ನಿಶ್ಯಂಕ ವೀಣಾ ಎಂದು ಎಂಟು ವಿಧಗಳುಂಟು ಎನ್ನುತ್ತಾನೆ. ಇವು ವೀಣೆಯ ವಿಕಾಸದ ಒಂದೊಂದು ಹಂತವನ್ನು ಸೂಚಿಸುತ್ತವೆ ಎಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಈಗ ದಕ್ಷಿಣ ಭಾರತದಲ್ಲಿ ಪ್ರಚಲಿತವಿರುವ "ಸರಸ್ವತಿವೀಣಾ" ಕೇವಲ ಮೂರು ಶತಮಾನಗಳಷ್ಟು ಹಳೆಯದು.

ಇದನ್ನು 'ಸರ್ವರಾಗಮೇಳವೀಣಾ' ಎಂಬ ಹೆಸರಿನಿಂದ ವಿಜಯನಗರದ ಮಂತ್ರಿಯಾಗಿದ್ದ ರಾಮಾಮಾತ್ಯನು ಪರಿಷ್ಕರಿಸಿ ಪ್ರಸಿದ್ಧಿಗೆ ತಂದನೆಂದು ಕೆಲವರೂ, ತಂಜಾವೂರಿನ ರಘುನಾಥನಾಯಕ ಅವನ ಪ್ರಧಾನ ಮಂತ್ರಿ ಗೋವಿಂದ ದೀಕ್ಷಿತರ ನೆರವಿನಿಂದ ಈಗ ಬಳಕೆಯಲ್ಲಿರುವ ವೀಣೆಯನ್ನು ಪರಿಷ್ಕರಿಸಿ ಸಿದ್ಧಪಡಿಸಿದನೆಂದು ಕೆಲವರೂ ಹೇಳುತ್ತಾರೆ. ಈ ಪರಿಷ್ಕಾರಕ್ಕೆ ಮೊದಲು ಸ್ಥಾಯಿಯಾದ ಅಥವ ಚಲಿಸಬಹುದಾದ ಇಪ್ಪತ್ತಕ್ಕೂ ಕಡಿಮೆ ಮೆಟ್ಟುಗಳಿದ್ದವು. ಪರಿಷ್ಕಾರಾನಂತರ ಸ್ಥಾಯಿಯಾದ ಒಂದೊಂದು ಸ್ವರಾಷ್ಟಕಕ್ಕೆ ಹನ್ನೆರಡರಂತೆ ಇಪ್ಪತ್ನಾಲ್ಕು ಮೆಟ್ಟುಗಳಾದವು.

ವೀಣೆಗೆ ಎರಡು ಬುರುಡೆಗಳಿರುತ್ತವೆ. ಒಂದು ಮರದಲ್ಲಿಯೇ ಕೊರೆದ ಸುಮಾರು ಒಂದು ಅಡಿ ವ್ಯಾಸದಷ್ಟು ಅಗಲವಾದ ಮುಖವುಳ್ಳದ್ದು. ಇದಕ್ಕೆ ಹೊಂದಿಕೊಂಡ ಹಾಗೆ ಅದೇ ಮರದದಂಡಿ ಇರುತ್ತದೆ. ಇದೂ ಟೊಳ್ಳಾಗಿ ಇರುತ್ತದೆ. ಈ ಎರಡರ ಮೇಲ್ಭಾಗವನ್ನೂ ತೆಳುವಾದ ಮರದ ಹಲಗೆಯಿಂದ

ಮುಚ್ಚಿರುತ್ತದೆ. ಈ ಎರಡೂ ಭಾಗಗಳನ್ನು ಉಬ್ಬುದಂತದ ಬಳಿಯಿಂದ ಸೇರಿಸಲಾಗಿರುತ್ತದೆ. ಬುರುಡೆಯ ಕಡೆ ದಪ್ಪಕ್ಕಿಂತ ದಂಡಿಯು ಇನ್ನೊಂದು ಕೊನೆ ಚಿಕ್ಕದಾಗಿದ್ದು ಮೃಗಮುಖದ ಯಾಳಿಗೆ ಸೇರಿಸಲ್ಪಟ್ಟಿರುತ್ತದೆ. ಈ ಯಾಳಿ, ದಂತಗಳು ಸೇರುವ ಕಡೆ ಚಿಕ್ಕದಾದ ಸೋರೆ ಕಾಯಿಯ ಬುರುಡೆಯನ್ನು ಹೊಂದಿಸಲಾಗಿರುತ್ತದೆ. ಇದು ಅನುರಣನಕಾರಕ. ಈ ಬುರುಡೆಯ ತಳವನ್ನು ಕೊಯ್ದು ರಂಧ್ರಮಾಡಲಾಗಿರುತ್ತದೆ. ದಂಡಿಯ ಎರಡು ಅಂಚುಗಳಲ್ಲೂ ಮೇಣದಂಥ ಪದಾರ್ಥದಿಂದ ಮಾಡಿದ ಸ್ತರವಿರುತ್ತದೆ. ಇದರ ಮೇಲೆ 24 ಹಿತ್ತಾಳೆ, ಕಂಚು ಅಥವ ಬೆಳ್ಳಿಯಿಂದ ಮಾಡಿದ ಮೆಟ್ಟುಗಳನ್ನು ಸ್ಥಿರವಾಗಿ ಜೋಡಿಸಲಾಗಿರುತ್ತದೆ.

ಸಾಮಾನ್ಯವಾಗಿ ವೀಣೆಯು ಬರುಡೆ, ದಂಡಿ, ಯಾಳಿಗಳು ಪ್ರತ್ಯೇಕವಾಗಿದ್ದು ಒಟ್ಟಿಗೆ ಜೋಡಿಸಲಾಗಿರುತ್ತದೆ. ಆದರೆ ಬುರುಡೆ ಮತ್ತು ದಂಡಿಗಳೆರಡನ್ನೂ ಒಂದೇ ಮರದಲ್ಲಿ ಕೊರೆದು ಮಾಡಿದ ಏಕದಂಡಿ ವೀಣೆಗಳು, ಮೂರು ಭಾಗಗಳನ್ನೂ ಒಂದೇ ಮರದಲ್ಲಿ ಕೊರದು ಮಾಡಿದ ಏಕಾಂಡ ವೀಣಾಗಳೂ ಇರುತ್ತವೆ. ಇವುಗಳ ಧ್ವನಿ ಕ್ರಮವಾಗಿ ಹೆಚ್ಚು ಇಂಪಾಗಿ ಇರುತ್ತದೆ.

ವೀಣೆಗೆ ಏಳು ತಂತಿಗಳಿರುತ್ತವೆ. ಇವುಗಳಲ್ಲಿ ನಾಲ್ಕು ಸಂಗೀತಕ್ಕೆ, ಮೂರು ಶ್ರುತಿ, ಲಯಕ್ಕಾಗಿ. ಸಂಗೀತದ ನಾಲ್ಕು ತಂತಿಗಳು ಬುರುಡೆಯ ಕೊನೆಯಿಂದ ಆರಂಭವಾಗಿ ಬುರುಡೆಯ ಮೇಲಿನ ಮರದ ಕುದುರೆಯ ಮೇಲಿನಿಂದ 24 ಮೆಟ್ಟುಗಳ ಮೇಲೆ ಹಾಯಿಸಿ ಯಾಳಿಯ ಕಂಠ ಭಾಗದಲ್ಲಿ ಕಿವಿಗಳಿಗೆ ಬಿಗಿದಿರುತ್ತದೆ. ಇನ್ನು ಮೂರು ತಂತಿಗಳನ್ನು ಕುದುರೆಯ ಪಕ್ಕದಲ್ಲಿ ಜೋಡಿಸಿ ದಂಡಿಯ ಒಂದು ಪಕ್ಕದಲ್ಲಿ ದಂತದ ಮೆಟ್ಟುಗಳ ಆಧಾರದಿಂದ ಹಾಯಿಸಿ ಯಾಳಿಯ ಬಳಿ ಕಿವಿಗಳಿಗೆ ಸುತ್ತಲಾಗುತ್ತದೆ.

ವೀಣೆಯ ಏಳು ತಂತಿಗಳಿಗೂ ಬೇರೆ ಬೇರೆ ಹೆಸರುಗಳುಂಟು ಸಂಗೀತದ ನಾಲ್ಕು ತಂತಿಗಳು–

1. ಸಾರಣಿ = ಮಧ್ಯಸ್ಥಾಯಿಯಾ ಷಡ್ಜ 2. ಪಂಚಮ = ಮಂದ್ರಸ್ಥಾಯಿಯಾ

ಪಂಚಮ. 3. ಮಂದರ = ಮಂದ್ರಸ್ಥಾಯಿ ಷಡ್ಜ 4. ಅನುಮಂದ್ರ = ಅನುಮಂದ್ರಸ್ಥಾಯಿಯ ಪಂಚಮ. ಶ್ರುತಿ ತಂತಿಗಳು 1. ಪಕ್ಕಾಸಾರಣೆ = ಮಧ್ಯಸ್ಥಾಯಿಯ ಷಡ್ಜ 2. ಪಕ್ಕಾ ಪಂಚಮ = ಮಧ್ಯಸ್ಥಾಯಿಯ ಪಂಚಮ. 3. ಹೆಚ್ಚು ಸಾರಣೆ = ತಾರಸ್ಥಾಯಿಯ ಷಡ್ಜ.

ವೀಣೆ ಸಂಗೀತ ವಾದ್ಯಗಳಲ್ಲಿ ಅತ್ಯಂತ ವೈಜ್ಞಾನಿಕವಾದುದು. ಇದರ ಧ್ವನಿ ಶ್ರೀಮಂತವಲ್ಲದಿದ್ದರೂ ಬಹು ಇಂಪಾದುದು, ಮನೋಹರವಾದುದು ಆಗಿದೆ. ಇದನ್ನು ಏಕಾಂತ ವಾದ್ಯ ಎಂದು ಕರೆಯುತ್ತಾರೆ. ಒಳಮನೆಯಲ್ಲಿ, ಅಂತಃಪುರ, ಗರ್ಭಗೃಹಗಳಲ್ಲಿ ವೀಣಾವಾದನವನ್ನು ಕೇಳುವುದು ಒಂದು ಭಾಗ್ಯವಾದರೆ ಇದನ್ನು ಕಲಿತು ನುಡಿಸುವುದು ಒಂದು ತಪಸ್ಸು. ಸಾಧನೆಯಿಂದ ಸಿದ್ಧಿಸುವ ವಿದ್ಯೆ.

ಡಮರು ನಟರಾಜ ಶಿವನ ಪ್ರಿಯವಾದ್ಯ. ತಾಳವಾದ್ಯಗಳಲ್ಲಿದು ಅಪೂರ್ವವಾದುದು ; ಅಷ್ಟೇ ಕ್ಲಿಷ್ಟವಾದುದು. ಇದನ್ನು ನುಡಿಸುವವರೆ ಇಲ್ಲವಾಗಿ ಇದು ಜಾನಪದ ವಾದ್ಯಗಳ ಹಾಗೂ ಪವಿತ್ರ ವಾದ್ಯಗಳ ಗುಂಪಿಗೆ ಸೇರಿಹೋಗಿದೆ. ನೃತ್ಯಕಲಾವಿದರೊಬ್ಬರು "ಡಮರು ವಾದ್ಯವನ್ನು ಮಧ್ಯಕ್ಕೆ ಇಬ್ಭಾಗವಾಗಿ ತುಂಡು ಮಾಡಿ, ಅಗಲವಾದ ಭಾಗಗಳನ್ನು ಸೇರಿಸಿ, ಕಿರಿದಾದ ಭಾಗಕ್ಕೆ ಚರ್ಮವನ್ನು ಹೊದಿಸಿದರೆ ಮೃದಂಗವಾಗುತ್ತದೆ" ಎಂದು ಬಣ್ಣಿಸಿದ್ದಾರೆ. ಮೃದಂಗಕ್ಕೆ ಮೂಲ ಡಮರು ಇದ್ದೀತೆ ಎಂಬುದು ಸಂಶೋಧಕರ ಆಸಕ್ತಿ ಕೆರಳಿಸಬಹುದಾದ ಅಂಶ. ಸಣ್ಣದಾದ ನಡು ಅಗಲವಾದ ಪಕ್ಕೆಗಳಿರುವ ಈ ಚರ್ಮ ವಾದ್ಯದ ರಚನೆ ಉಳಿದೆಲ್ಲ ಚರ್ಮ ವಾದ್ಯಗಳನ್ನೇ ಹೋಲುತ್ತದೆ. ಆದರೆ ಇದನ್ನು ನುಡಿಸುವ ರೀತಿ ಮಾತ್ರ ಬೇರೆ. ಕೊನೆಗಳು ಗಂಟಾಗಿರುವ ಎರಡು ದಾರಗಳನ್ನು ನಡುವಿನಲ್ಲಿ ಕಟ್ಟಿದ್ದು, ನಡುವನ್ನು ಹಿಡಿದು ತಿರುಗಿಸಿದಾಗ ಆ ಗಂಟುಗಳು ಚರ್ಮದ ಹೊದಿಕೆಗೆ ಬಡಿದು ಶಬ್ದ ಉಂಟಾಗುತ್ತದೆ. ಅದೇ ಹೊತ್ತಿನಲ್ಲಿ ಚರ್ಮವನ್ನು ಬಿಗಿದಿರುವ ದಾರಗಳನ್ನು ಬೆರಳುಗಳಿಂದ ಒತ್ತಿ ಅಥವ ಸಡಿಲಿಸುವ ಮೂಲಕ ವಿವಿಧ ಧ್ವನಿ ಉಂಟಾಗುವಂತೆ ಮಾಡಲಾಗುವುದು.

ಶಿವನ ಭಕ್ತರಿಗೆ ಪರಮಪೂಜ್ಯವಾದ ಈ ವಾದ್ಯವನ್ನು ಕಾಪಾಲಿಕರು,

ಗೊರವಯ್ಯಗಳು ಪೂಜಾಕಾಲದಲ್ಲಿ ಬಾರಿಸುತ್ತಾರೆ. ಬುಡುಬುಡುಕೆಯವರು ಬಾರಿಸುವ ಇದೇ ಹೆಸರಿನ ವಾದ್ಯ ಡಮರುವಿನ ಮತ್ತೊಂದು ರೂಪ.

## 28. ಪ್ರಹೇಲಿಕಾ

ಪ್ರಹೇಲಿಕಾ ಎಂದರೆ ಸಮಸ್ಯೆಗಳು, ಒಗಟುಗಳು ಎಂದರ್ಥ. ಇದು ಕೇವಲ ಮನರಂಜಕ ಕಲೆಯಲ್ಲ, ಪಾಂಡಿತ್ಯ, ಬುದ್ಧಿಶಕ್ತಿಯ ಪರೀಕ್ಷಾ ವಿಧಾನ ಎಂದರೂ ಸಲ್ಲುತ್ತದೆ. ವೇದಕಾಲದಿಂದಲೂ ಈ ಕಲೆ ನಮ್ಮಲ್ಲಿ ಬೆಳೆದು ಬಂದಿದೆ. ದ್ವಂದ್ವಾರ್ಥ, ಬಹ್ವರ್ಥಗಳನ್ನಿಟ್ಟು ಪ್ರಶ್ನೆ ಹಾಕುವುದು, ವೇದಾಂತದ ಸೂಕ್ಷ್ಮ ತತ್ವಗಳನ್ನೂ, ತಾಂತ್ರಿಕ ಆಚರಣೆಯ ರಹಸ್ಯಗಳನ್ನೂ ಚರ್ಚಿಸುವಾಗ ಸಾಮಾನ್ಯರಿಗೆ ತಿಳಿಯದಂತೆ ಗೂಢಾರ್ಥಗಳನ್ನಿಟ್ಟು ವಾದಿಸುವುದು ಉಪನಿಷತ್ತುಗಳಲ್ಲೂ ಕಾವ್ಯಗಳಲ್ಲೂ ಕಾಣಬರುತ್ತವೆ.

ಈ ಕಲೆಯಲ್ಲಿ ಎರಡು ರೀತಿಗಳುಂಟು. ಕೇವಲ ಬೇಸರವನ್ನು ಕಳೆಯಲು, ಮನರಂಜನೆಗಾಗಿ ಹಾಸ್ಯಪ್ರಧಾನವಾದ ಒಗಟುಗಳನ್ನು ಸೃಷ್ಟಿಸಿ, ಉತ್ತರ ಹೇಳುವುದು ಒಂದು ರೀತಿ. ಎದುರಾಳಿಯ ವಿದ್ವತ್ತು, ಪಾಂಡಿತ್ಯಗಳನ್ನು ಪರೀಕ್ಷಿಸುವಂತೆ ಕ್ಲಿಷ್ಟವಾದ ಸಮಸ್ಯೆಗಳನ್ನೊಡ್ಡುವುದು ಮತ್ತೊಂದು ರೀತಿ.

ಭಗವದ್ಗೀತೆಯಲ್ಲಿನ– "ಊರ್ಧ್ವಮೂಲಮಧಃ ಶಾಖಃ ಅಶ್ವತ್ಥಂ ಪ್ರಾಹುರವ್ಯಯಂ" ಎಂಬ ಶ್ಲೋಕ, ಮುಂಡಕೋಪನಿಷತ್ತಿನ "ದ್ವಾಸುಪರ್ಣಾ ಸಯುಜಾ ಸಖಾಯಾ" ಎಂಬ ಮಂತ್ರಗಳು ಸಮಸ್ಯಾತ್ಮಕವಾಗಿದ್ದು, ರಹಸ್ಯಾರ್ಥಗಳನ್ನು ಒಳಗೊಂಡಿರುವುದನ್ನು ಇಲ್ಲಿ ಉದಹರಿಸಬಹುದು.

ಕನ್ನಡದಲ್ಲಿ ಕುಂತಿ-ಪಂಪನ ಸಂವಾದ ಪ್ರಹೇಲಿಕಾ ಕಲೆಗೆ ಉತ್ತಮ ನಿದರ್ಶನ. ಪಂಪ ಹೇಳುತ್ತಾನೆ ;

"ದನವಂ ಕಡಿಕಡಿದು ಬಸದಿಗೆಳೆಯುತ್ತಿರ್ದರ್"

ಎಂದು. ಇಲ್ಲಿ ಶಬ್ದಾರ್ಥ ಜೈನ ಧರ್ಮಕ್ಕೆ ತೀರಾ ವಿರುದ್ಧವಾದುದು. ಈ ಸಮಸ್ಯೆಯನ್ನು ಕಂತಿ–

"ವನದೊಳಗೆ ಪುಟ್ಟಿ ಬೆಳೆಯುತೆ ।
ತನಗಂಪಂ ಪತ್ತುದೆಸೆಗೆ ಬೀರುತ್ತಿರ್ಪ ॥
ಘನತರ ಸುರುಚಿರ ಸಚ್ಚಂ ।
ದನವಂ ಕಡಿಕಡಿದು ಬಸದಿಗೆಯ್ದುತ್ತಿರ್ದರ್ ॥"

ಎಂದು ಬಿಡಿಸಿ ಹೇಳುತ್ತಾಳೆ.

ಜಾನಪದ ಸಾಹಿತ್ಯದಲ್ಲೂ ಸಮಸ್ಯಾತ್ಮಕ ವಾದ-ವಿವಾದಗಳುಂಟು. ಹಲಸಿನ ತೊಳೆಯನ್ನು "ಚಿನ್ನದ ಪೆಟ್ಟಿಗೆಯಲ್ಲಿ ಬೆಳ್ಳಿಯ ಲಿಂಗ" ಎಂಬ ಒಗಟುಗಳ ಮೂಲಕ ಚಿತ್ರಿಸುವ ಸಾಹಿತ್ಯ ಸಾಕಷ್ಟು ದೊರಕುತ್ತದೆ. ಕೋಲಾಟದ ಸವಾಲು ಜವಾಬುಗಳು ಪ್ರಹೇಲಿಕಾ ಕಲೆಯ ಒಂದು ರೂಪ. ಉದಾಹರಣೆಗೆ :

ಸವಾಲು—ಒಬ್ಬೀಗೆ ನಾಕ್‌ಮೊಲೆ, ಒಬ್ಬೀಗೆ ಎರಡ್ಮೊಲೆ, ಒಬ್ಬೀಗೆ ಸದ್ಯಾ ಮೊಲೆಯಿಲ್ಲ.

ಜವಾಬು—ಗೋವೀಗೆ ನಾಕ್‌ಮೊಲೆ, ಆಡೀಗೆ ಎರಡ್ಮೊಲೆ, ಕೋಳೀಗೆ ಸದ್ಯಾ ಮೊಲೆಯಿಲ್ಲ.

ಸವಾಲು—ಒಬ್ನೀಗೆ ಕಾಲ್ಕೊಟ್ಟೆ, ಒಬ್ನೀಗೆ ಕೈಕೊಟ್ಟೆ, ಒಬ್ನೀಗೆ ಸೀರೆಯ ಸೆಳಕೊಟ್ಟೆ.

ಜವಾಬು—ಪಂಚಾಲನ್ಗೆ ಕಾಲ್ಕೊಟ್ಟೆ, ಬಳ್ಗಾರ್ಗೆ ಕೈಕೊಟ್ಟೆ, ಅಗಸಂಗೆ ಸೀರೆಯ ಸೆಳಕೊಟ್ಟೆ.

ದಂಡಿ ತನ್ನ ಕಾವ್ಯಾದರ್ಶದಲ್ಲಿ 16 ಬಗೆಯ ಪ್ರಹೇಲಿಕಾಗಳುಂಟೆಂದು ಹೇಳುತ್ತಾನೆ.

## 29. ಪ್ರತಿಮಾಲಾ

ವಲ್ಲಭರು ಪ್ರತಿಕೃತಿಗಳನ್ನು ರಚಿಸುವುದು ಎಂದೂ, ಭಾಸ್ಕರ ನರಸಿಂಹ ವೇಷಧರಿಸುವುದು ಎಂದೂ, ಮಿತ್ರ ವಿಗ್ರಹಶಿಲ್ಪವೆಂದೂ 'ಪ್ರತಿಮಾಲಾ' ಎಂಬುದಕ್ಕೆ ಅರ್ಥಮಾಡಿದ್ದಾರೆ. ಆದರೆ ಯಶೋಧರ 'ಅಂತ್ಯಾಕ್ಷರಿ' ಎಂಬ ಇನ್ನೊಂದು ಹೆಸರಿನಿಂದಲೂ ಇದನ್ನು ಕರೆದಿದ್ದಾನೆ. ಇದೇ ಸರಿಯಾದ ವಿವರಣೆ ಎನ್ನಿಸುತ್ತದೆ.

ಒಬ್ಬರು ಕವಿತೆಯ ಒಂದು ಪಾದವನ್ನು ಹೇಳುತ್ತಾರೆ ; ಇನ್ನೊಬ್ಬರು ಆ ಪಾದದ ಕಡೆಯ ಅಕ್ಷರವನ್ನು ಮೊದಲಕ್ಷರವಾಗಿ ಉಳ್ಳ ಶಬ್ದದಿಂದ ಆರಂಭಿಸಿ ಕವಿತೆಯ ಎರಡನೆಯ ಪಾದವನ್ನು ಹೇಳಬೇಕು. ಹೀಗೆ ಸ್ಪರ್ಧೆ ನಡೆದು ಯಾರು ಅಂತ್ಯಾಕ್ಷರವನ್ನು ಆರಂಭಾಕ್ಷರವಾಗಿಟ್ಟುಕೊಂಡು ಕವಿತೆ ಕಟ್ಟಲಾರರೋ ಅವರು ಸೋತರೆಂದು ನಿರ್ಧರಿಸಲಾಗುವುದು. ಇದೂ ಸಹ ಕೇವಲ ಮನರಂಜನೆಯ ಕಲೆಯಲ್ಲ, ವಿದ್ವತ್ ಪರೀಕ್ಷಾ ಕಲೆ.

## 30. ದುರ್ವಾಚಕ ಯೋಗ

ಸುಲಭವಾಗಿ ಅರ್ಥವಾಗುವಂಥ ಶಬ್ದವನ್ನು ಸುತ್ತು ಬಳಸಿ ಹೇಳುವ ರೀತಿ ದುರ್ವಾಚಕ ಯೋಗ ಎಂದು ಗಂಗೂಲಿಯವರು ವಿವರಿಸಿ, ಒಂದು ಉದಾಹರಣೆ ಕೊಟ್ಟಿದ್ದಾರೆ: ಬೂಡ್ಸ್ ಹಾಕಿದ ಕಾಲನ್ನು, ಮಿರುಗುವ ಮೃದು ಚರ್ಮದಲ್ಲಿ ಹುದುಗಿಸಿದ ಅಂಗ ಎಂದು ಕರೆಯುವುದು—ಎಂಬುದಾಗಿ, ಈ ವಿವರಣೆ ಅಷ್ಟೇನೂ ಸಮರ್ಪಕವಾಗಿಲ್ಲ. ಭಾಸ್ಕರ ನರಸಿಂಹ ಅಕ್ಷರಗಳಿಗೆ ಬದಲು ಸಂಕೇತಗಳನ್ನು ಬಳಸಿ ಬರೆಯುವುದು ಎನ್ನುತ್ತಾನೆ. ಮಿತ್ರ ಅವರು ಅಣಕಿಸುವುದು, ಧ್ವನಿಯನ್ನು ಅನುಕರಣೆ ಮಾಡುವುದು ಎನ್ನುತ್ತಾರೆ. ಈ ವಿವರಣೆಗಳನ್ನು ಡಾ॥ ವೆಂಕಟಸುಬ್ಬಯ್ಯನವರು ಒಪ್ಪಿಲ್ಲ. ಜೀವಗೋಸ್ವಾಮಿ ಅವರು "ಮಾತಿನಲ್ಲಿ ವ್ಯಕ್ತಪಡಿಸಲಾರದ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ವಿಧಾನ" ಎಂದಿದ್ದಾರೆ. ಬೈಗಳಂತೆ ತೋರುವ ಶಬ್ದಗಳನ್ನು ಹೊಗಳಿಕೆಗಾಗಿ ಬಳಸುವ ಜಾಣತನವಿದು ಎಂದರೆ ಹೆಚ್ಚು ಸಮರ್ಪಕವಾದೀತು.

### 31. ಪುಸ್ತಕ ವಾಚನ

ಕೇಳುವವರಿಗೆ ಅರ್ಥವಾಗುವಂತೆ ಸ್ಫುಟವಾದ ಉಚ್ಚಾರಣೆಯಿಂದ, ಭಾವಗಳನ್ನು ಸ್ಪಷ್ಟಪಡಿಸುವಂತೆ ಧ್ವನಿಯ ಏರಿಳಿತಗಳಿಂದ, ಓದುವ ಕಲೆ. ಪುರಾಣಗಳನ್ನು ಹೇಳುವುದು ಈ ಕಲೆಯ ಒಂದು ಅಂಗ.

### 32. ನಾಟಕಾಖ್ಯಾಯಿಕಾ ದರ್ಶನ

ಇದು ಪುಸ್ತಕವಾಚನದಂತೆಯೇ 'ವಾಚನ' ಕಲೆ ಎಂದೇ ಹೇಳಬಹುದು. ನಾಟಕಗಳನ್ನೂ, ಆಖ್ಯಾನ (ಕತೆ)ಗಳನ್ನೂ ಕೇಳುವವರ ಕಣ್ಣಿಗೆ ಕಟ್ಟುವಂತೆ ವಿವರಿಸುವ ಕಲೆ ಇದು. ಯಶೋಧರ, ಕಾವ್ಯಜ್ಞಾನವೇ ನಾಟಕಾಖ್ಯಾಯಿಕಾ ದರ್ಶನ ಎಂದು ವಿವರಿಸುತ್ತಾನೆ. ಸ್ಥಿರ ಚಿತ್ರಗಳಿಂದ ಘಟನೆಗಳನ್ನು ಪ್ರದರ್ಶಿಸುವ ರೀತಿ ಎಂದೂ ಕೆಲವರು ಅರ್ಥ ಮಾಡಿದ್ದಾರೆ. ಹರಿಕಥೆ ಮಾಡುವುದು "ನಾಟಕಾಖ್ಯಾಯಿಕಾ ದರ್ಶನ" ಎನಿಸಬಹುದು. ಕತೆಯನ್ನು ನಾಟಕದಂತೆ ಶ್ರೋತೃಗಳಿಗೆ ಪ್ರದರ್ಶಿಸುವ ಕಲೆ ಎನ್ನುವುದೇ ಸಮರ್ಪಕ.

### 33. ಕಾವ್ಯಸಮಸ್ಯಾಪೂರ್ಣ

ಇದೊಂದು ಪಂಡಿತ ರಂಜನೀಯವಾದ ಕಲೆ. ಸಮಸ್ಯಾತ್ಮಕವಾದ ಶ್ಲೋಕಪಾದವನ್ನೋ, ಶ್ಲೋಕಾರ್ಧವನ್ನೋ ಒಬ್ಬರು ಹೇಳಿದಾಗ ಇನ್ನೊಬ್ಬರು ಆ ಸಮಸ್ಯೆಯನ್ನು ಪರಿಹರಿಸುವಂತೆ ಶ್ಲೋಕವನ್ನು ಪೂರ್ಣವಾಗಿಸುವ ಕಲೆ ಇದು. ಸಾಹಿತ್ಯಾಭಿಮಾನಿಗಳೂ ವಿದ್ವತ್ ಪಕ್ಷಪಾತಿಗಳೂ ಆಗಿದ್ದ ಪೂರ್ವಕಾಲದ ರಾಜರ ಆಸ್ಥಾನಗಳಲ್ಲಿದ್ದ ಪಂಡಿತರು ಈ ಕಲೆಯನ್ನೂ ಒಂದು ಹವ್ಯಾಸವಾಗಿ ಬೆಳಸಿಕೊಳ್ಳುತ್ತಿದ್ದರಂತೆ. ಕವಿಯ ಸೃಷ್ಟ್ಯಾತ್ಮಕ ಶಕ್ತಿ, ಪ್ರತಿಭೆ, ಛಂದೋಜ್ಞಾನ, ಲೋಕಜ್ಞಾನಗಳನ್ನು ಪರೀಕ್ಷಿಸಲು ಕಾವ್ಯ ಸಮಸ್ಯೆಗಳು ಸಾಧಕವಾಗಿದ್ದವು. "ಕಮಲೇ ಕಮಲೋತ್ಪತ್ತಿಃ" ಎಂಬ ಲೋಕಪ್ರಸಿದ್ಧವಾದ ಸಮಸ್ಯಾತ್ಮಕ ಶ್ಲೋಕ ಒಂದರ ಸುತ್ತ ಹೆಣೆದಿರುವ ಭೋಜ-ಕಾಳಿದಾಸ ನಾಟಕದಲ್ಲಿನ ಪ್ರಸಂಗ ಈ ಕಲೆಯ ಸ್ವರೂಪವನ್ನು ವಿವರಿಸಲು ಒಂದು ಉದಾಹರಣೆಯಂತಿದೆ.

### 34. ಪಟ್ಟಿಕಾವೇತ್ರಬಾಣವಿಕಲ್ಪ

ಬೆತ್ತ ಬಿದಿರು ಮುಂತಾದವುಗಳಿಂದ ಪೀಠೋಪಕರಣಗಳನ್ನೂ, ಬುಟ್ಟಿ ತಟ್ಟೆಗಳನ್ನೂ ಹೆಣೆಯುವ ಕಲೆ.

### 35. ತಕ್ಷಕರ್ಮ

ಕೆಲವರು ತರ್ಕಕರ್ಮ ಎಂದೂ ಉಲ್ಲೇಖಿಸಿದ್ದಾರೆ. ಈ ಎರಡನೆಯದೇ ಸರಿ ಎಂದು ಹೆಚ್ಚು ಜನ ಪಂಡಿತರು ಅಭಿಪ್ರಾಯ ಪಡುತ್ತಾರೆ. "ತಕ್ಷಣ" ಎಂಬ ಬೇರೆ ಕಲೆಯೊಂದಿರುವುದರಿಂದ ಈ ಅಭಿಪ್ರಾಯ ಉಚಿತವಾಗಿಯೇ ಇದೆ. ಚರಕ - ತಕಲಿಗಳಿಂದ ನೂಲುತೆಗೆಯುವುದೇ ತರ್ಕಕರ್ಮ.

### 36. ತಕ್ಷಣ

ತಕ್ಷಣ ಎಂದರೆ ಸ್ಥೂಲವಾಗಿ ಬಡಗಿ ಕೆಲಸ ಎಂದಾಗುತ್ತದೆ. ಪೀಠೋ-ಪಕರಣಗಳನ್ನೂ ಆಲಂಕಾರಿಕ ವಿಗ್ರಹಾದಿಗಳನ್ನೂ ಮರದಲ್ಲಿ ಕೆತ್ತಿಮಾಡುವುದು. ತಕ್ಷಣವೆಂದರೆ ಮೂರ್ತಿಶಿಲ್ಪವೆಂದು ಶ್ರೀಕಂಠಶಾಸ್ತ್ರಿಗಳೆಂದಿದ್ದಾರೆ. ದಾರು ಶಿಲ್ಪ ಎನ್ನುವುದು ಸರಿಯಾದ ಅರ್ಥವೆನ್ನಬಹುದು.

### 37. ವಾಸ್ತುವಿದ್ಯಾ

ವಾಸ್ತು ಎಂದರೆ ವಾಸಮಾಡುವ ಸ್ಥಳ ಎಂದರ್ಥ. ವಾಸ್ತು ವಿದ್ಯೆ ಎಂದರೆ ಪಟ್ಟಣ, ಗ್ರಾಮ, ದೇವಾಲಯ, ಅರಮನೆ ಮತ್ತು ಸಾಮಾನ್ಯರ ವಾಸಗೃಹಗಳನ್ನು ಕಟ್ಟುವುದಕ್ಕೆ ಅನುಸರಿಸುವ ಕ್ರಮ, ಶಾಸ್ತ್ರ ಮತ್ತು "ಆರ್ಕಿಟೆಕ್ಚರ್" ಎಂದು ಕರೆಯುವ ವೃತ್ತಿ ವಿದ್ಯೆಯೇ ಇದು.

ವಾಸ್ತು ವಿದ್ಯೆಯನ್ನು ಕುರಿತು ಸಂಸ್ಕೃತದಲ್ಲಿ ಅನೇಕ ಗ್ರಂಥಗಳಿವೆ. ಮಾನಸಾರ, ವಾಸ್ತು ವಿದ್ಯಾ, ಬೃಹತ್ಸಂಹಿತಾ, ಅಂಶುಮದ್ಭೇದಾಗಮ, ರೂಪ ಮಂಡನ ಮೊದಲಾದ ಗ್ರಂಥಗಳಲ್ಲಿ ದೇವಾಗಾರ, ರಾಜಾಗಾರ, ಮಾನುಷಗೃಹ ರಚನೆಯ ವಿಧಿ ವಿಧಾನಗಳು ನಿರೂಪಿಸಲ್ಪಟ್ಟಿವೆ. ಅರ್ಥಶಾಸ್ತ್ರಾದಿಗಳಲ್ಲಿ

ಕೋಟೆ ಕೊತ್ತಲುಗಳನ್ನು ಕಟ್ಟುವ ರೀತಿ ವಿವರಿಸಲ್ಪಟ್ಟಿದೆ. ಭಾರತೀಯ ವಾಸ್ತು ಶಾಸ್ತ್ರವೂ ಉಳಿದೆಲ್ಲಾ ಶಾಸ್ತ್ರಗಳಂತೆಯೇ ಧರ್ಮ, ಸಂಪ್ರದಾಯ ಗಳಿಗೆ ಬದ್ಧವಾದುದು. ಭೂಶುದ್ಧಿ, ತಲವಿನ್ಯಾಸ, ವಾಸಿಸುವರ ವೃತ್ತಿಗೆ ಅನುಗುಣವಾದ ನಿಯೋಜನೆಗಳ ವಿಧಿಗಳೆಲ್ಲ ನಿರೂಪಿಸಲ್ಪಟ್ಟಿವೆ. ಪಟ್ಟಣ, ಗ್ರಾಮಗಳನ್ನು ರಚಿಸುವಾಗ ಮೊದಲೇ ರಸ್ತೆ, ಚರಂಡಿ, ರಾಜಮಾರ್ಗ, ಸರಹದ್ದು ಮುಂತಾದವುಗಳನ್ನು ಗುರುತಿಸಿ, ಅವುಗಳಿಗೆ ಸ್ಥಳ ಬಿಟ್ಟು ಮನೆ ಗಳನ್ನು ಕಟ್ಟಬೇಕೆಂದು ಹೇಳಿದೆ. ಇಟ್ಟಿಗೆಗಳನ್ನು ಮಾಡುವ ವಿಧಿ, ಕಲ್ಲು ಕಡೆದು ಗಾರೆ ಇಲ್ಲದೆಯೇ ಭದ್ರವಾಗಿ ಜೋಡಿಸುವ ವಿಧಾನ, ವಜ್ರಲೇಪ ವೆಂಬ "ಸಿಮೆಂಟ್" ನಂಥ ಪದಾರ್ಥ ರಚನೆಗಳೆಲ್ಲ ವಿವರಿಸಲ್ಪಟ್ಟಿವೆ. ವಾಸ ಮಾಡುವವರಿಗೆ ಶಾಂತಿ, ಪುಷ್ಟಿ, ಜಯ ಮತ್ತು ಸರ್ವಕಾಮ ಫಲಗಳು ದೊರಕುವಂತೆ ವಿವಿಧ ಆಕಾರದ ಮನೆಗಳ ರಚನೆ ಬಣ್ಣಿಸಲ್ಪಟ್ಟಿದೆ.

ನಾಲ್ಕೂಕಡೆ ಬಾಗಿಲುಗಳುಳ್ಳ ಅರಮನೆ ದೇವಾಲಯಗಳ ರಚನೆಗೆ "ಸರ್ವತೋಭದ್ರ" ಎಂದು ಹೆಸರು. ಸಾಮಾನ್ಯ ಪ್ರಜೆಯ ವಾಸದ ಮನೆಗಳಿಗೆ 1 ನಂದ್ಯಾವರ್ತ, 2 ವರ್ಧಮಾನ, 3 ಸ್ವಸ್ತಿಕ, 4 ರುಚಕ, 5 ಧಾನ್ಯಕ, 6 ಸುಕ್ಷೇತ್ರ, 7 ವಿಶಾಲ, 8 ಪಕ್ಷಘ್ನ, 9 ಯಮಸೂರ್ಯ, 10 ದಂಡ, 11 ಘನ, 12 ಚುಲ್ಲಿ, 13 ಕಾರ್ಯ, 14 ಸಿದ್ಧಾರ್ಥ, 15 ವಜ್ರ ಎಂಬ ಹೆಸರುಗಳುಂಟು.

ಮುಂಭಾಗದಲ್ಲಿ ಬೀದಿ ಇದ್ದರೆ ಸೋಷ್ಣೀಷ ಎಂದೂ ಹಿಂಭಾಗದಲ್ಲಿ ಬೀದಿ ಇದ್ದರೆ ಶ್ರೇಯೋಚ್ಚ ಎಂದೂ ಎಡ-ಬಲಗಳಲ್ಲಿದ್ದರೆ ಸಾವಷ್ಟಂಭ ಎಂದೂ ನಾಲ್ಕು ಕಡೆ ಬೀದಿ ಇದ್ದರೆ ಸುಸ್ಥಿತ ಎಂದೂ ಹೆಸರು.

ಬಾಗಿಲುಗಳಿರುವ ದಿಕ್ಕಿನ ಆಧಾರದ ಮೇಲೆ ಪೂರ್ವಕ್ಕೆ ಬಾಗಿಲಿದ್ದರೆ ಇಂದ್ರ, ಜಯಂತ ಎಂದೂ, ದಕ್ಷಿಣಕ್ಕಿದ್ದರೆ ಯಾಮ್ಯ, ವಿತಥ ಎಂದೂ, ಪಶ್ಚಿಮಕ್ಕೆ ಬಾಗಿಲಿದ್ದರೆ ಪುಷ್ಪದಂತ ವಾರುಣ ಎಂದೂ, ಉತ್ತರಕ್ಕೆ ಬಾಗಿಲಿದ್ದರೆ ಭಲ್ಲಾಟ, ಸೌಮ್ಯ ಎಂದೂ ಕರೆಯಲಾಗುವುದು. ಮನೆಯ ಮುಂಬಾಗಿಲನ್ನು ಕುಂಭ, ಶ್ರೀಪರ್ಣಿ, ಲತಾ ವಿಶೇಷಗಳಿಂದ ಕೆತ್ತಿ ಅಲಂಕರಿಸ ಬೇಕು ಎಂದು ಮತ್ಸ್ಯಪುರಾಣ ವಿಧಿಸುತ್ತದೆ.

ವಿವೇಕಿಯಾದವನು ದೇವಾಲಯ, ಜೂಜುಕಟ್ಟೆ, ಮಂತ್ರಿಯ ಮನೆ, ನಾಲ್ಕು ಬೀದಿಗಳು ಸೇರುವ ಕಡೆ ಮನೆ ಕಟ್ಟಬಾರದು.

ಕಟ್ಟಿದ ಮನೆಯಲ್ಲಿ ಈಶಾನ್ಯಕ್ಕೆ ದೇವರ ಮನೆ, ಆಗ್ನೇಯಕ್ಕೆ ಅಡಿಗೆ ಮನೆ, ನೈರುತ್ಯಕ್ಕೆ ಉಗ್ರಾಣ, ವಾಯುವ್ಯ ಅಥವ ಉತ್ತರ ದಿಕ್ಕಿಗೆ ಭಾವಿ, ಅದರ ಸಮೀಪದಲ್ಲಿ ಪಶ್ಚಿಮಕ್ಕೆ ಹಿತ್ತಲು, ಸ್ನಾನದ ಮನೆಗಳಿರಬೇಕು ಎಂದು ವಿಷ್ಣು ಧರ್ಮೋತ್ತರ ಹೇಳುತ್ತದೆ.

ಮನೆಯ ಸುತ್ತಲೂ ವಿವಿಧ ಹೂಗಿಡ, ಮರ ಬಳ್ಳಿಗಳನ್ನು ಬೆಳಸ ಬೇಕೆಂದು ಮತ್ಸ್ಯಪುರಾಣ ಬೋಧಿಸುತ್ತಾ, ಮನೆಯ ಪೂರ್ವಭಾಗದಲ್ಲಿ ಅಲ, ದಕ್ಷಿಣಗಲ್ಲಿ ಅತ್ತಿ, ಪಶ್ಚಿಮದಲ್ಲಿ ಅರಳಿ, ಉತ್ತರದಲ್ಲಿ ಬಸರಿ ಮರಗಳಿದ್ದರೆ ಇಷ್ಟಾರ್ಥಸಿದ್ಧಿ ಎಂದು ಹೇಳಿದೆ. ಸುರಹೊನ್ನೆ ಅಶೋಕ, ಪಗಡೆ, ಬನ್ನಿ, ತಿಲಕ, ಸಂಪಿಗೆ, ದಾಳಿಂಬೆ, ಹಿಪ್ಪಲಿ, ದ್ರಾಕ್ಷಿ, ಹೂಬಳ್ಳಿಗಳ ಚಪ್ಪರಗಳು ಮನೆಯ ಸುತ್ತಲೂ ಇರಬೇಕು. ನಿಂಬೆ, ಅಡಿಕೆ, ಹಲಸು, ತಾಳೆ, ಜಾಜಿ, ತಾವರೆ, ಸೇವಂತಿಗೆ, ಮಲ್ಲಿಗೆ, ತೆಂಗು, ಬಾಳೆ, ಪಾದರಿಗಿಡಗಳನ್ನು ಮನೆಯ ಸುತ್ತ ಬೆಳೆಸುವುದು ಶ್ರೇಯಸ್ಕರ ಎನ್ನಲಾಗಿದೆ.

ಭೃಗು. ಅತ್ರಿ, ವಶಿಷ್ಠ, ವಿಶ್ವಕರ್ಮ, ಮಯ, ನಾರದ, ನಗ್ನಜಿತ್, ವಿಶಾಲಾಕ್ಷ, ಪುರಂದರ, ಬ್ರಹ್ಮ, ಕುಮಾರ, ನಂದೀಶ್ವರ, ಶೌನಕ, ಗರ್ಗ, ವಾಸುದೇವ, ಅನಿರುದ್ಧ, ಶುಕ್ರ ಮತ್ತು ಬೃಹಸ್ಪತಿ ಇವರುಗಳು ವಾಸ್ತು ಶಾಸ್ತ್ರಜ್ಞರೆಂದು ಮತ್ಸ್ಯಪುರಾಣ ತಿಳಿಸುತ್ತದೆ.

ಪ್ರಾಚೀನ ಭಾರತೀಯ ವಾಸ್ತು ಶಾಸ್ತ್ರಜ್ಞರ ನೈಪುಣ್ಯ ಅಚ್ಚರಿ ಮೂಡಿಸುವಷ್ಟು ವಿಪುಲವೂ, ಪರಿಪೂರ್ಣವೂ ಆಗಿದ್ದಿತು.

## 38. ರೂಪ್ಯರತ್ನಪರೀಕ್ಷಾ

ರಾಜಮುದ್ರಾ ಸಹಿತವಾದ ಚಿನ್ನ ಅಥವ ಬೆಳ್ಳಿಯ ನಾಣ್ಯಕ್ಕೆ ರೂಪ್ಯ

ಎಂದು ಹೆಸರು. ಅಧಿಕೃತ ಮತ್ತು ಖೋಟಾ ನಾಣ್ಯಗಳನ್ನು ಪರೀಕ್ಷಿಸುವುದು ರೂಪ್ಯ ಪರೀಕ್ಷಾ.

ರತ್ನಗಳು ಒಂಬತ್ತು ವಿಧ : ಮುತ್ತು, ಮಾಣಿಕ್ಯ, ವೈಢೂರ್ಯ, ಗೋಮೇಧಿಕ, ವಜ್ರ, ವಿದ್ರುಮ, ಪದ್ಮರಾಗ, ಮರಕತ, ನೀಲ. ಈ ಒಂದೊಂದರಲ್ಲೂ ಹಲವು ಜಾತಿಗಳುಂಟು. ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರತ್ನ ಪರೀಕ್ಷೆಯ ವಿಧಿ, ವಿಧಾನಗಳನ್ನು ವಿವರಿಸುವ ಒಂದು ಅಧ್ಯಾಯವೇ ಉಂಟು. ಪ್ರತಿಯೊಂದು ಜಾತಿಯ ರತ್ನವೂ ದೊರೆಯುವ ಸ್ಥಳ ಜಾತಿ ಭೇದಗಳು, ಗುಣ-ದೋಷಗಳು ಮೊದಲಾದುವನ್ನೆಲ್ಲ ಇಲ್ಲಿ ವಿವರಿಸಿದೆ. ಯಾರು ಯಾವ ರತ್ನವನ್ನೂ ಬೇಕಾದರೂ ಧರಿಸುವುದು ಸಲ್ಲ. ರತ್ನಗಳು ಕೇವಲ ಆಭರಣಗಳು ಮಾತ್ರವಲ್ಲ. ಸುಖ ದುಃಖಗಳನ್ನು ನೀಡಬಲ್ಲ ಶಕ್ತಿಯುಳ್ಳವುಗಳೆಂಬ ನಂಬಿಕೆ ಉಂಟು. ಈ ಕಾರಣದಿಂದ ಧರಿಸುವ ಮೊದಲು ಅವುಗಳ ಗುಣ-ದೋಷಗಳನ್ನು ಮೌಲ್ಯ ನಿರ್ಧಾರದ ದೃಷ್ಟಿಯಿಂದ ಮಾತ್ರವಲ್ಲ, ಧರಿಸುವವನ ಯೋಗ ಕ್ಷೇಮದ ದೃಷ್ಟಿಯಿಂದಲೂ ಪರೀಕ್ಷಿಸುವುದು ಪದ್ಧತಿ.

## 39. ಧಾತುವಾದ

ಯಶೋಧರನು ಈ ಕಲೆಯನ್ನು ಕ್ಷೇತ್ರವಾದ ಎಂದೂ ಕರೆದಿದ್ದಾನೆ. ಭೂಗರ್ಭದಲ್ಲಿರುವ ಲೋಹದ ಅದಿರನ್ನು ಶೋಧಿಸುವುದು ; ಅದಿರಿನ ಗುಣದೋಷಗಳನ್ನು ಅರಿಯುವುದು ; ಅದಿರಿನಿಂದ ಲೋಹವನ್ನು ಪ್ರತ್ಯೇಕಿಸುವುದು ; ಪ್ರತ್ಯೇಕಿಸಿದ ಲೋಹವನ್ನು ಶುದ್ಧೀಕರಿಸುವುದು ಧಾತುವಾದವೆನಿಸುತ್ತದೆ.

## 40. ಮಣಿರಾಗಕರ ಜ್ಞಾನ

ಇದು ಮೇಲಿನೆರಡಕ್ಕಿಂತ ಭಿನ್ನವಾದುದೇನೂ ಅಲ್ಲ. ಶ್ರೀಧರ ವಲ್ಲಭ ಮುಂತಾದವರು ಇದನ್ನು ಮಣಿರಾಗ ಆಕರಜ್ಞಾನ ಎಂದು ಎರಡು ಕಲೆಗಳಾಗಿ ವಿಭಜಿಸಿದ್ದಾರೆ. ಹೀಗೆ ವಿಭಜಿಸಿ, ಮಣಿರಾಗವೆಂದರೆ ಬಿಳಿಯ ಹರಳಿನ ಮೇಲೆ ವರ್ಣಲೇಪ ಮಾಡುವುದು ಎಂದೂ, ಆಕರ ಜ್ಞಾನ ಎಂದರೆ

ಲೋಹದ ಮತ್ತು ವಜ್ರಗಳ ಮಣಿಗಳನ್ನು ಪತ್ತೆಮಾಡುವ ವಿಧಾನವೆಂದೂ ವಿವರಿಸಿದ್ದಾರೆ. ಆದರೆ ಧಾತುವಾದದಂತೆ ಮಣಿರಾಗಕರ ಜ್ಞಾನವೆಂದರೆ ವಜ್ರಗಳ ಗಣಿ ಪತ್ತೆಹಚ್ಚುವ ಮತ್ತು ಅವುಗಳನ್ನು ಸಾಣೆ ಹಿಡಿಯುವ ವಿಧಾನ ಎನ್ನುವುದು ಸಮಂಜಸವಾದ ವಿವರಣೆ.

## 41. ವೃಕ್ಷಾಯುರ್ವೇದ

ಈ ಶಬ್ದದ ಅರ್ಥ ಸ್ಪಷ್ಟವೇ ಇದೆ. ವೃಕ್ಷಗಳ ರೋಗ ನಿದಾನ ಮತ್ತು ಚಿಕಿತ್ಸಾಶಾಸ್ತ್ರ ಇದು. ಆದರೆ 'ವೃಕ್ಷ' ಎಂದರೆ ಕೇವಲ ಮರಗಳಿಗೆ ಸಂಬಂಧಿಸಿದ ಚಿಕಿತ್ಸಾ ಶಾಸ್ತ್ರವಲ್ಲ. ಎಲ್ಲ ವಿಧವಾದ ಸಸ್ಯಗಳ ವಿಜ್ಞಾನವೂ ಇದರಲ್ಲಿ ಅಡಕವಾಗಿದೆ. ಮಣ್ಣಿನ ಗುಣನಿರ್ಧಾರ, ಬೀಜಗಳ ಪರೀಕ್ಷೆ ಮತ್ತು ಸಂಸ್ಕಾರ, ಬಿತ್ತನೆಯ ವಿಧಿ ಮತ್ತು ಕಸಿಮಾಡುವ ರೀತಿ, ವಿವಿಧ ಗೊಬ್ಬರ ಗಳನ್ನು ತಯಾರಿಸುವ ಕ್ರಮ, ಯಾವ ಸಸ್ಯಕ್ಕೆ ಯಾವ ಗೊಬ್ಬರ, ಹೇಗೆ ಹಾಕುವುದು ಎಂಬ ತೋಟಗಾರಿಕೆಗೆ ಸಂಬಂಧಿಸಿದ ಎಲ್ಲವೂ ಈ ವಿಭಾಗದಲ್ಲಿ ಸೇರುತ್ತದೆ.

ಅಭಿಲಷಿತಾರ್ಥ ಚಿಂತಾಮಣಿ, ವಿಷ್ಣುಧರ್ಮೋತ್ತರ ಪುರಾಣ ಮೊದ ಲಾದ ಗ್ರಂಥಗಳಲ್ಲಿ ವೃಕ್ಷ ಚಿಕಿತ್ಸೆ ಕುರಿತು ಹೇಳಲಾಗಿದೆ. ಉದಾಹರಣೆಗೆ ಇಲ್ಲಿ ಒಂದೆರಡನ್ನು ಉಲ್ಲೇಖಿಸಲಾಗಿದೆ.

ಮರಗಳಲ್ಲಿ ಹೂ ಬಿಡದೆ, ಹಣ್ಣು ಬಿಡದಿದ್ದರೆ ಕೊಂಬೆಯನ್ನು ಕತ್ತರಿಸಿ ನೋಡಬೇಕು. ಅದು ಬಣ್ಣ ಬದಲಾಯಿಸಿದ್ದರೆ ರೋಗಗ್ರಸ್ತವೆಂದು ತಿಳಿದು ವಾಯುವಿಳಂಗ, ತುಪ್ಪ, ಕೇಸರಿ ಬೆರೆಸಿದ ತಣ್ಣೀರನ್ನು ಅದರ ಪಾತಿಗೆ ಎರೆಯಬೇಕು.

ಕುರಿ ಹಿಕ್ಕೆ, ಆಡಿನ ಹಿಕ್ಕೆ ಒಣಗಿಸಿ, ಅಕ್ಕಿ-ಎಳ್ಳು ಬೆರೆಸಿ ಪುಡಿಮಾಡಿ, ಅದನ್ನು ದನದ ಮಾಂಸದ ನೀರಿನಲ್ಲಿ ಏಳುದಿನ ನೆನೆಸಿ ರೋಗ ಹತ್ತಿದ ಪೈರು, ಮರ, ಗಿಡಗಳಿಗೆ ಚಿಮುಕಿಸಬೇಕು. ಎಲ್ಲ ಹೂ ಹಣ್ಣು ಗಿಡಗಳಿಗೆ ವಾಯು

ವಿಳಂಗ, ಕಲಗಚ್ಚು, ಮೀನಿನ ಮಾಂಸದ ನೀರು ಬೆರೆಸಿ ಹಾಕಿದರೆ ಎಲ್ಲ ವಿಷವಾದ ರೋಗಗಳೂ ನಿವಾರಣೆಯಾಗುವುದು.

ಕಾಮಿನಿಯರು ಮದ್ಯದಿಂದ ಬಾಯಿ ಮುಕ್ಕಳಿಸಿ ಪಗಡೆಗಿಡದ ಪಾತಿಗಳಿಗೆ ಉಗುಳಿದರೆ ತುಂಬ ಸೊಗಸಾದ ಹೂ ಬಿಡುವುದು. ಇಂಥ ಪಲವಾರು ಕುತೂಹಲಕಾರಿ ವಿಧಾನಗಳನ್ನು ವಿಷ್ಣುಧರ್ಮೋತ್ತರದಲ್ಲಿ ಬಣ್ಣಿಸಲಾಗಿದೆ.

## 42. ಮೇಷ-ಕುಕ್ಕುಟ-ಲಾವಿಕ (ಯುದ್ಧ) ವಿಧಿ

ಕುರಿ-ಕೋಳಿ-ಕೋಣಗಳ ಕಾಳಗಕ್ಕೆ ಸಂಬಂಧಿಸಿದ ವಿದ್ಯೆ ಇದು. ಯಶೋಧರ ಈ ವಿದ್ಯೆಯನ್ನು "ಸಜೀವ ದ್ಯೂತಂ" ಎಂದು ಕರೆದಿದ್ದಾನೆ. ಕಾಳಗವಾಡಲೆಂದೇ ಸಾಕಿದ ಕುರಿ-ಕೋಳಿ-ಕೋಣಗಳ ಮೇಲೆ ಪಣ ಕಟ್ಟಿ ಕಾಳಗವಾಡಿಸುವುದು ಬಹು ಪ್ರಾಚೀನ ಕಾಲದಿಂದಲೂ ಇದ್ದ ಪದ್ಧತಿ. ರಕ್ತ ಕಂಡು ಹೇಸುವ ಈ ನಾಗರಿಕ ಯುಗದಲ್ಲಿ ಈ ಕ್ರೀಡೆ ನಶಿಸಿಹೋಗಿದೆ. ಕೋಳಿ-ಕುರಿಗಳಿಗೆ ಕಾಳಗ ಕಲಿಸುವುದನ್ನೇ ವೃತ್ತಿಯಾಗಿ ಮಾಡಿಕೊಂಡಿದ್ದವರೂ ಇದ್ದರು. ಈಗಲೂ ಗ್ರಾಮಾಂತರಗಳಲ್ಲಿ ಸಂತೆ-ಜಾತ್ರೆಗಳಲ್ಲಿ ಅಪರೂಪವಾಗಿ ಕೋಳಿ ಕಾಳಗ ನಡೆಸುವವರುಂಟು. ಹರಿತವಾದ ಕಿರುಗತ್ತಿಗಳನ್ನು ಕಾಲುಗಳಿಗೆ ಕಟ್ಟಿದ ಹುಂಜಗಳು ಭಯಂಕರವಾಗಿ ಯುದ್ಧಮಾಡಿ ಒಂದನ್ನೊಂದು ಸೀಳಿ ಹಾಕುವುದುಂಟು.

ವೈಯ್ಯಾಕರಣ ವೇದಾಂತಿ ಭರ್ತೃಹರಿಯ "ವಾಕ್ಯಪದೀಯ"ದಲ್ಲಿ ಕುರಿ ಕಾಳಗದ ಪ್ರಸ್ತಾಪವಿದೆ. ದಶಕುಮಾರ ಚರಿತ್ರೆಯಲ್ಲಿ ಕೋಳಿ ಕಾಳಗದ ಕುತೂಹಲಕಾರಿ ವರ್ಣನೆ ಇದೆ.

## 43. ಶುಕ-ಸಾರಿಕಾ ಪ್ರಲಾಪನ

ಗಿಣಿ ಮತ್ತು ಮೈನಾ ಪಕ್ಷಿಗಳು ಧ್ವನಿ ಅನುಕರಣೆಯಲ್ಲಿ ಹೆಸರಾಗಿವೆ. ಅವುಗಳನ್ನು ಸಾಕಿ ಮಾತು ಕಲಿಸುವುದು ಮನೋರಂಜಕವಾದ ಹವ್ಯಾಸ. ಶ್ರೀಮಂತ ಪುತ್ರಿಯರೂ, ರಾಜಕುಮಾರಿಯರೂ ಈ ಹವ್ಯಾಸವನ್ನು ಇಟ್ಟು

ಕೊಂಡಿರುತ್ತಿದ್ದರು. ಅನೇಕ ವೇಳೆ ಈ ಪಕ್ಷಿಗಳು ಪ್ರಿಯ-ಪ್ರೇಯಸಿಯರ ನಡುವೆ ಸಂದೇಶವಾಹಕಗಳಾಗಿ ಸೇವೆ ಸಲ್ಲಿಸುತ್ತಿದ್ದವು. ಬೇಸರವಾದಾಗ ಹಾಡುತ್ತಿದ್ದವು, ಕತೆಗಳನ್ನು ಹೇಳುತ್ತಿದ್ದವು. ವಿರಹಿ ಪ್ರೇಯಸಿಯ ಮುಂದೆ ಪ್ರಿಯತಮನ ಧ್ವನಿಯಲ್ಲಿ ಹಾಡಿ ವಿರಹ ತಾಪವನ್ನು ಶಮನಮಾಡುತ್ತಿದ್ದವು. ಋಷ್ಯಾಶ್ರಮಗಳಲ್ಲಿ ಗಿಣಿಗಳು ವೇದಗಳನ್ನೂ ಹೇಳುತ್ತಿದ್ದವಂತೆ. ಈ ಪಕ್ಷಿಗಳು ಮಾಡದಿದ್ದ ಕೆಲಸವೇ ಇಲ್ಲ. ಬಾಣನ ಕಾದಂಬರಿಯಲ್ಲಿನ ಗಿಣಿವೇದಪಾಠ ಹೇಳಿಕೊಳ್ಳುತ್ತಿದ್ದ ವಿದ್ಯಾರ್ಥಿಗಳ ಉಚ್ಚಾರಣೆ, ಉದಾತ್ತಾನುದಾತ್ತಗಳನ್ನು ತಿದ್ದುತ್ತಿದ್ದವಂತೆ. ಶಂಕರಾಚಾರ್ಯರು ಮಂಡನ ಮಿಶ್ರನ ಮನೆಗೆ ಹೋದಾಗ ಅಲ್ಲಿ ಗಿಣಿಗಳು ವೇದಾಂತ ವಾಕ್ಯಾರ್ಥಗಳನ್ನು ನುಡಿಯುತ್ತಿದ್ದವಂತೆ.

ಮಾತು ಕಲಿತ ಗಿಣಿಗಳು ಕೆಲವೊಮ್ಮೆ ಸಂಕೋಚಕ್ಕೆ ಕಾರಣವಾಗುವಂತೆ ವರ್ತಿಸುತ್ತಿದ್ದುದೂ ಉಂಟು. ಅಮರು ಕವಿ ಇಂಥ ಒಂದು ಪ್ರಸಂಗವನ್ನು ಸುಂದರವಾಗಿ ಚಿತ್ರಿಸಿದ್ದಾನೆ. ರಾತ್ರಿಯಲ್ಲಿ ಪ್ರಿಯ-ಪ್ರೇಯಸಿಯರು ಏಕಾಂತದಲ್ಲಿ ನಿಶ್ಚಿಂತೆಯಿಂದ ನಡೆಸಿದ ಪ್ರೇಮಾಲಾಪವನ್ನೆಲ್ಲ ಕೇಳಿಸಿಕೊಂಡ ಗಿಣಿ ಬೆಳಗಾದ ಮೇಲೆ, ಗುರು ಹಿರಿಯರ ಮುಂದೆಲ್ಲ ಆ ಪ್ರೇಮಾಲಾಪವನ್ನು ಪುನರುಚ್ಚರಿಸ ತೊಡಗಿತಂತೆ. ಅದನ್ನು ಕೇಳಿ ನಾಚಿದ ಆ ತರುಣಿ ಕಿವಿಯಲ್ಲಿದ್ದ ಪದ್ಮರಾಗ ಮಣಿಯನ್ನು ದಾಳಿಂಬೆ ಬೀಜವೆಂಬ ನೆವದಿಂದ ಅದರ ಬಾಯಿಯಲ್ಲಿಟ್ಟು ಅದರ ಮಾತನ್ನು ನಿಲ್ಲಿಸಿದಳಂತೆ.

## 44. ಉತ್ಸಾದನಸಂವಾಹನಕೇಶಮರ್ದನೇಚ ಕೌಶಲಮ್

ಇದನ್ನು ಉತ್ಸಾದನ ಕೌಶಲ, ಸಂವಾಹನ ಕೌಶಲ, ಕೇಶಮರ್ದನ ಕೌಶಲ ಎಂದು ಕೆಲವರು ಮೂರಾಗಿ ವಿಭಜಿಸಿದ್ದಾರೆ. ವಸ್ತುತಃ ಇದು ಒಂದೇ ಕಲೆ. ಪಾದಗಳಿಗೆ ಎಣ್ಣೆ ತಿಕ್ಕುವುದು ಉತ್ಸಾದನ, ಮೈಗೆ ಎಣ್ಣೆ ತಿಕ್ಕುವುದು ಸಂವಾಹನ, ತಲೆ-ಕೂದಲಿಗೆ ಎಣ್ಣೆ ತಿಕ್ಕುವುದು ಕೇಶಮರ್ದನ. ಗಂಗೂಲಿ ಅವರು ಕಾಲಿನಿಂದ ಎಣ್ಣೆ ತಿಕ್ಕುವುದು (ಸೊಂಟ, ಮೈ-ಕೈ ನೋವಾದಾಗ ಕೆಲವರು ಕಾಲಿನಿಂದ ತುಳಿಸಿಕೊಳ್ಳುವುದುಂಟು) ಎಂದು ಅರ್ಥಮಾಡಿದ್ದಾರೆ. ಆದರಿದು ಅಷ್ಟೇನೂ ಹಿತವಾದ ಅರ್ಥವಲ್ಲ. ಅಂಗಾಲು, ತೊಡೆ, ಮೊಣ

ಕಾಲುಗಳಿಗೆ ಎಣ್ಣೆ ತಿಕ್ಕಿಸಿ. ನೀವಿಸಿಕೊಳ್ಳುವುದೇ ಉತ್ಸಾದನ. ಹಿಂದಿನ ಕಾಲದಲ್ಲಿ ಶ್ರೀಮಂತರು ತೈಲಾಭ್ಯಂಜನದ ಅಂಗವಾಗಿ ಎಣ್ಣೆ ಒತ್ತಿಸಿಕೊಳ್ಳಲು ಈ ಕಲೆಯಲ್ಲಿ ಪರಿಣತರಾದವರನ್ನು ನೇಮಿಸಿಕೊಳ್ಳುತ್ತಿದ್ದರು. ಆಧುನಿಕ ವೈದ್ಯ – ವಿಜ್ಞಾನಿಗಳು ತೈಲ ಮರ್ದನವನ್ನು ಕೆಲ ವಿಶಿಷ್ಟ ರೋಗಗಳಲ್ಲಿ ಪರಿಣಾಮಕಾರಿ ಚಿಕಿತ್ಸೆ ಎಂದು ಅಂಗೀಕರಿಸಿದ್ದಾರೆ.

ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಸಂವಾಹಕರೆಂಬ ತೈಲಮರ್ದಕರನ್ನು ಗೂಢಚಾರರನ್ನಾಗಿ ನೇಮಿಸಿಕೊಳ್ಳಬೇಕೆಂದು ಹೇಳಲಾಗಿದೆ.

## 45. ಅಕ್ಷರಮುಷ್ಟಿಕಾ ಕಥನ

ಭಾಗವತದ ವ್ಯಾಖ್ಯಾನಕಾರರಾದ ಜೀವಗೋಸ್ವಾಮಿ ಮತ್ತು ವಲ್ಲಭರು ಇದನ್ನು ಎರಡಾಗಿ ವಿಭಜಿಸಿ ಅಕ್ಷರ ಕಥನ ಎಂದರೆ ಬರೆಯುತ್ತಿರುವ ಕೈಓಟ ನನ್ನು ಗಮನಿಸಿ ಬರೆಯುತ್ತಿರುವುದೇನೆಂಬುದನ್ನು ಹೇಳುವುದು ; ಮುಷ್ಟಿಕಾ-ಕಥನ ಎಂದರೆ ಮುಷ್ಟಿಯಲ್ಲಿ ಮುಚ್ಚಿಟ್ಟುಕೊಂಡಿರುವುದನ್ನು ಊಹಿಸಿ ಹೇಳುವುದು ಎಂದು ವಿವರಿಸಿದ್ದಾರೆ. ಮೋಡಿಚರ್ಲ ಆಂಜನೇಯಶಾಸ್ತ್ರೀ ಅವರು ಕಾವ್ಯ ಒಂದರಲ್ಲಿನ ಶ್ಲೋಕದ ಪಾದಸಂಖ್ಯೆ, ಅಕ್ಷರಸಂಖ್ಯೆಗಳನ್ನು ಹೇಳಿದಾಗ ಶ್ಲೋಕವನ್ನು ಉದ್ಧರಿಸುವ ಕಲೆ ಎಂದಿದ್ದಾರೆ. ಉದಾಹರಣೆಗೆ : ಮೊದಲನೆ ಪಾದದಲ್ಲಿನ ನಾಲ್ಕನೆ ಅಕ್ಷರ 'ನ್', ಹತ್ತನೆ ಅಕ್ಷರ 'ಸ್ಥಿ' ಎಂದು ಮುಂತಾಗಿ ಹೇಳಿದಾಗ ಆ ಶ್ಲೋಕವನ್ನು ಉದ್ಧರಿಸುವುದು ; ಅಥವಾ ಅದೇ ಕ್ರಮದಲ್ಲಿರುವಂತೆ ಆಶುಕವಿತ್ವದಿಂದ ಶ್ಲೋಕ ರಚಿಸುವುದು. ಅಷ್ಟಾವಧಾನ ಮಾಡುವವರು ಈ ವಿಧವಾದ ವಿದ್ವತ್ತನ್ನು ಪ್ರದರ್ಶಿಸುತ್ತಾರೆ.

ಗಂಗೂಲಿ ಅವರು ಕೈ ಬೆರಳುಗಳ ಸಂಕೇತದಿಂದ ಸಂದೇಶಗಳನ್ನು ನೀಡುವ ಕಲೆ ಎಂದಿದ್ದಾರೆ. ಇದು ಸಮರ್ಪಕ ವಿವರಣೆ ಎಂದೆನಿಸುವುದಿಲ್ಲ.

## 46. ಮ್ಲೇಚ್ಛಿತಕ ವಿಕಲ್ಪ

ಪ್ರತಿಯೊಂದು ಅಕ್ಷರದ ಹಿಂದೆಯೂ ಬೇರೊಂದು ಅರ್ಥವಿಲ್ಲದ ಅಕ್ಷರ

ವನ್ನು ಸೇರಿಸಿ ಸಾಂಕೇತಿಕ ಭಾಷೆಯೊಂದನ್ನು ಸೃಷ್ಟಿಸಿಕೊಂಡು ಮಾತನಾಡುವ ಮತ್ತು ಪತ್ರ ಬರೆಯುವ ಕಲೆ ಇದು. ಉದಾ; "ಕನಾಕಳೆಕನಮ್ಮಕಮಕ ನೆಕಗೆ ಕಊಕಟಕಕ್ಕೆ ಕಬಕನ್ನಿ" ಈ ವಾಕ್ಯದಲ್ಲಿನ 'ಕ' ಕಾರಗಳನ್ನೆಲ್ಲ ತೆಗೆದು ಹಾಕಿದಾಗ "ನಾಳೆ ನಮ್ಮ ಮನೆಗೆ ಊಟಕ್ಕೆ ಬನ್ನಿ" ಎಂದಾಗುತ್ತದೆ. ಮೂರನೆಯವರಿಗೆ ತಿಳಿಯದಿರಲೆಂದು ಈ ರೀತಿ ಮಾತನಾಡುವುದನ್ನು ಈಗಲೂ ಅನೇಕರು ಅಭ್ಯಾಸ ಮಾಡಿಕೊಂಡಿರುತ್ತಾರೆ.

## 47. ದೇಶಭಾಷಾ ವಿಜ್ಞಾನ

ಹಲವು ದೇಶೀಯ ಭಾಷೆಗಳ ಜ್ಞಾನ. ಭಾಷಾಜ್ಞಾನ ಎಂದರೆ ಕೇವಲ ಮಾತನಾಡುವುದಷ್ಟೆ ಅಲ್ಲ. ಭಾಷೆಗಳ ಹುಟ್ಟು, ಬೆಳವಣಿಗೆ, ಬರವಣಿಗೆಯ ರೀತಿ, ಮಾತನಾಡುವ, ಗ್ರಾಂಥಿಕ ಹಾಗೂ ಜನಪದ ವೈವಿಧ್ಯಗಳ ಜ್ಞಾನ.

ವಾತ್ಸ್ಯಾಯನನು ಮಾತ್ರವೇ ಅಲ್ಲ, ಕಲೆಗಳ ಬಗ್ಗೆ ಬರೆದಿರುವ ಇನ್ನೂ ಹಲವು ವಿದ್ವಾಂಸರು ದೇಶಭಾಷಾವಿಜ್ಞಾನವನ್ನು ಕಲಿಯಬೇಕಾದ ವಿದ್ಯೆಗಳಲ್ಲಿ ಒಂದೆಂದು ಉಲ್ಲೇಖಿಸಿರುವುದು ಕುತೂಹಲಕಾರಿ. ಇದರಿಂದ ಈ ನಾಡಿನಲ್ಲಿ ಯಾವ ಒಂದು ಕಾಲಕ್ಕೂ ಯಾವ ಒಂದು ಭಾಷೆಯೂ "ಅಖಿಲ ಭಾರತದ ಏಕೈಕ ಭಾಷೆ" ಆಗಿರಲಿಲ್ಲ ಎಂದು ಭಾವಿಸಬಹುದಾಗಿದೆ.

## 48. ಪುಷ್ಪಶಕಟಿಕ

ಶಕಟಿಕ ಎಂದರೆ ಚಿಕ್ಕಗಾಡಿ, ಆಟದ ಗಾಡಿ ಎಂದರ್ಥ. ಪುಷ್ಪಶಕಟಿಕಾ ಎಂದರೆ ಆಟಕ್ಕಾಗಿ ರಚಿಸುವ ಹೂವಿನ ಗಾಡಿ. ಕೇವಲ ಆಟಕ್ಕೆಂದೇ ಆಟ ದೇವತಾ ಉತ್ಸವಾದಿಗಳಿಗೆ ಹೂವಿನ ರಥ ಮಂಟಪಗಳನ್ನು ರಚಿಸುವ ಕಲೆಯೂ ಇದಾಗಬಹುದು. ಕಾಶೀನಾಥನೆಂಬ ವ್ಯಾಖ್ಯಾನಕಾರ ಹೂಗಳ ಸಂಖ್ಯೆ, ಬಣ್ಣಗಳ ಆಧಾರದ ಮೇಲೆ ಭವಿಷ್ಯವನ್ನೂ, ಶಕುನವನ್ನೂ ಹೇಳುವ ವಿದ್ಯೆ ಎನ್ನುತ್ತಾನೆ. ಡಾ॥ ವೆಂಕಟಸುಬ್ಬಯ್ಯ ಇದನ್ನು ಅನುಮೋದಿಸಿದ್ದಾರೆ.

## 49. ನಿಮಿತ್ತ ಜ್ಞಾನ

ಶಕುನಗಳ ಜ್ಞಾನವೇ ನಿಮಿತ್ತ ಜ್ಞಾನ. ಪಕ್ಷಿಗಳ ಹಾರಾಟ, ಕೂಗಾಟ, ಹಲ್ಲಿ ಲೊಚಗುಟ್ಟುವುದು ಅಥವ ಮೈಮೇಲೆ ಬೀಳುವುದು, ಬೆಕ್ಕು ಅಡ್ಡ ಬರುವುದು, ಬ್ರಾಹ್ಮಣ, ವೃದ್ಧ ವಟು, ಸನ್ಯಾಸಿ. ಸುಮಂಗಲಿಯ ದರ್ಶನ ಯಾವ ಕಾರ್ಯಕ್ಕೆ ಶುಭ, ಯಾವಾಗ ಅಶುಭ; ಅಶುಭವಾದ ಸಂದರ್ಭದಲ್ಲಿ ಪರಿಹಾರವೇನು ಎಂಬುದನ್ನೆಲ್ಲ ತಿಳಿದಿರುವುದೇ ನಿಮಿತ್ತ ಜ್ಞಾನ. ನಮ್ಮ ಕಾವ್ಯ-ಇತಿಹಾಸಗಳಲ್ಲಿ ಇಂಥ ಶುಭಾಶುಭ ಶಕುನಗಳ ಜ್ಞಾನವಿದ್ದ ಅನೇಕ ನಾಯಕರ ಪ್ರಸ್ತಾಪವಿದೆ.

## 50. ಯಂತ್ರಮಾತೃಕಾ

ಯಂತ್ರಮಾತೃಕಾ ಎಂದರೆ ಯಂತ್ರಗಳ ಜ್ಞಾನ ಅರ್ಥಾತ್ "ಮೆಕಾನಿಕಲ್ ಎಂಜನಿಯರಿಂಗ್" ಎನ್ನುತ್ತಾರೆ ಗಂಗೂಲಿ ಅವರು. ಭಾಸ್ಕರ ನರಸಿಂಹ ಯಂತ್ರಗಳ ಸಹಾಯದಿಂದ ಗಾಳಿಯಲ್ಲಿ ಹಾರಾಡುವುದು ಎನ್ನುತ್ತಾನೆ. ಈ ಅರ್ಥ ಸರಿಯಾದರೆ ಇದಕ್ಕೆ ರಾಮಾಯಣದಲ್ಲಿ ನಿದರ್ಶನಗಳು ದೊರೆಯುತ್ತವೆ. ಲಂಕಾಪಟ್ಟಣವನ್ನು ವರ್ಣಿಸುತ್ತಾ ಹನುಮಂತನು "ಲಂಕಾಪಟ್ಟಣದ ದ್ವಾರಪ್ರದೇಶಗಳಲ್ಲಿ ಅಗಳ್ತಗಳಿಗೆ ನಾಲ್ಕೂಕಡೆ ಮರದ ಹಲಗೆಗಳಿಂದ ಮಾಡಿದ ಸಂಚಾರಮಾರ್ಗಗಳಿದ್ದು, ಅವು ಯಂತ್ರಗಳ ಸಹಾಯದಿಂದ ಚಲಿಸುತ್ತವೆ. ದ್ವಾರಪಾಲಕರು ವಾಸಮಾಡಲು ಯಂತ್ರಗೃಹಗಳಿವೆ. ಶತ್ರುಸೇನೆ ಸಮೀಪಿಸಿದೊಡನೆಯೇ ಯಂತ್ರಗಳ ಸಹಾಯದಿಂದ ಆ ದ್ವಾರ ಮಾರ್ಗಗಳ ಮೇಲಿನ ಹಲಗೆಗಳನ್ನು ತೆಗೆಯಲಾಗುವುದು. ಆಗ ಪಟ್ಟಣ ಪ್ರವೇಶ ದುಸ್ಸಾಧ್ಯವಾಗುವುದು" ಎಂದಿದ್ದಾನೆ. ವಿಶ್ವಕರ್ಮ ನಿರ್ಮಿತವಾದ ಪುಷ್ಪಕ ವಿಮಾನದ ಕಥೆ ಎಲ್ಲರಿಗೂ ಗೊತ್ತಿರುವುದೇ ಆಗಿದೆ.

ಭೂರ್ಜಪತ್ರ, ಚಿನ್ನ, ಬೆಳ್ಳಿ, ತಾಮ್ರಾದಿ ಲೋಹದ ತಗಡುಗಳ ಮೇಲೆ ಬಿಂದು, ತ್ರಿಕೋಣ, ಷಟ್ಕೋಣ, ದಳಗಳು ಮತ್ತು ಭೂಪುರಸಹಿತವಾದ ರೇಖಾಚಿತ್ರ ರಚಿಸಿ, ಬೀಜಾಕ್ಷರಗಳನ್ನು ಬರೆದು ಪೂಜೆಗಾಗಿ ವಿನಿಯೋಗಿಸುವ ಸಾಧನಕ್ಕೂ ಯಂತ್ರವೆಂದು ಹೆಸರು. ಇವುಗಳಲ್ಲಿ ಕೆಲವು ಕೇವಲ ಪೂಜೆ

ಗಾಗಿಯೂ ಮತ್ತೆ ಕೆಲವು ಧರಿಸಲಿಕ್ಕೂ ರಚಿತವಾಗುತ್ತವೆ. ಇವುಗಳನ್ನು ರಚಿಸುವ ಕ್ರಮ, ಪೂಜಾವಿಧಿಗಳು ತಂತ್ರ, ಮಂತ್ರಶಾಸ್ತ್ರಗಳಲ್ಲಿ ರಹಸ್ಯ ಭಾಷೆಯಲ್ಲಿ ವಿವರಿಸಲ್ಪಟ್ಟಿವೆ. ಈ ಯಂತ್ರಗಳ ರಚನಾಜ್ಞಾನವೇ ಯಂತ್ರಮಾತೃಕಾ ಎಂದು ಶ್ರೀಧರ, ವಲ್ಲಭ ಮತ್ತು ಡಾ॥ ವೆಂಕಟಸುಬ್ಬಯ್ಯನವರೆನ್ನುತ್ತಾರೆ.

## 51. ಧಾರಣಮಾತೃಕಾ

ಇದು ಮೇಲಿನ ಕಲೆಯ ಒಂದು ವಿಭಾಗ ಎಂದು ಶ್ರೀಧರಾದಿ ಟೀಕಾಕಾರರ ಅಭಿಪ್ರಾಯ. ಧಾರಣ ಎಂದರೆ ಧರಿಸುವುದು, ಕಾಪಾಡಿಕೊಳ್ಳುವುದು, ನೆನಪಿಟ್ಟುಕೊಳ್ಳುವುದು ಎಂದೆಲ್ಲ ಅರ್ಥವಾಗುತ್ತದೆ. ಈ ಮೂರನೆ ಅರ್ಥ ಇಲ್ಲಿ ಅನ್ವಯವಾಗುತ್ತದೆ. ವೇದಾಭ್ಯಾಸಿಗಳಿಗೆ ಧಾರಣಶಕ್ತಿ ಒಂದು ಅಗತ್ಯ ಅರ್ಹತೆ. ವಟುವನ್ನು ಆಶೀರ್ವದಿಸುವಾಗ, ಮತ್ತು ವಟುವು ಅಗ್ನಿಕಾರ್ಯದ ಅಂಗವಾಗಿ ಅಗ್ನಿಯನ್ನು ಪ್ರಾರ್ಥಿಸುವಾಗ, ಶ್ರದ್ಧಾ, ಮೇಧಾ, ಪ್ರಜ್ಞಾ, ಧಾರಣಾ ಶಕ್ತಿಗಳ ಅನುಗ್ರಹಕ್ಕಾಗಿ ಕೋರುವ ವೇದ ಮಂತ್ರಗಳುಂಟು. ಸಾಧನೆಯಿಂದ ಕರಗತವಾಗಬಲ್ಲ ಈ ವಿದ್ಯೆಯಲ್ಲಿ ಪರಿಣತರಾದವರು ಮಿತ್ರ ಗೋಷ್ಠಿಗಳಲ್ಲಿ ಸುಭಾಷಿತ, ಚಾಟುಪದ್ಯಗಳನ್ನೂ, ಕಾವ್ಯೇತಿಹಾಸದಲ್ಲಿನ ಸ್ವಾರಸ್ಯವರ್ಣನೆಗಳನ್ನೂ ಸಮಯೋಚಿತವಾಗಿ, ನಿರರ್ಗಳವಾಗಿ ಉದ್ಧರಿಸಿ ಶ್ರೋತೃಗಳನ್ನು ಬೆರಗುಗೊಳಿಸುವುದುಂಟು. ದಿ॥ ವೆಂಕಟಾಚಾರ್ಯರ ಕಾದಂಬರಿಗಳನ್ನು ಒಮ್ಮೆ ಓದಿ, ಕಂಠಪಾಠಮಾಡಿದಂತೆ ಇಡೀ ಕಥೆಯನ್ನು ಹೇಳುತ್ತಿದ್ದವರೊಬ್ಬರನ್ನು ಈ ಲೇಖಕ ನೋಡಿದ್ದಾನೆ. ಅಷ್ಟಾವಧಾನ ಮಾಡುವವರಿಗೆ ಧಾರಣಕಲೆ ಬಹು ಅಗತ್ಯ ಅರ್ಹತೆ.

## 52. ಸಂಪಾಠ್ಯ

ಈ ಕಲೆಯ ಅರ್ಥ ವಿವರಣೆಯ ಬಗ್ಗೆ ವಿವಿಧಾಭಿಪ್ರಾಯಗಳುಂಟು. ಭಾಗವತದ ಭಾಷ್ಯಕಾರರು ಇದನ್ನು "ಸಂವಾಚ್ಯ" ಎಂದು ಕರೆದಿದ್ದಾರೆ. ವಜ್ರಾದಿ ಘನವಸ್ತುಗಳಿಗೆ ರಂಧ್ರಕೊರೆಯುವುದು ಎಂದು ಒಬ್ಬಿಬ್ಬರು ಅರ್ಥ ಮಾಡಿದ್ದಾರೆ. ಭಾಸ್ಕರ ನರಸಿಂಹ ಸಂಯಕ್‌ಜ್ಞಾನ ಎಂದು ವಿವರಿಸಿದ್ದಾರೆ.

ಒಬ್ಬರು ಗಟ್ಟಿಯಾಗಿ ಪುಸ್ತಕವನ್ನು ಓದುತ್ತಿರುವಾಗ ಇತರರು ಅವರ ಓದನ್ನು ಅನುಸರಿಸಿಕೊಂಡು ಉದ್ಧರಿಸುವ ಕಲೆ ಎಂದೂ ಭಾಷ್ಯಕಾರರೊಬ್ಬರೆಂದಿದ್ದಾರೆ. ಸಂವಾದ ಕಲೆ ಎಂದು ಕೆಲವರ ಅಭಿಪ್ರಾಯ. ಇದೇ ಸರಿಯಾದುದೆಂದು ಡಾ॥ ವೆಂಕಟಸುಬ್ಬಯ್ಯನವರು ಸಮರ್ಥಿಸಿದ್ದಾರೆ.

## 53. ಮಾನಸೀ ಕಾವ್ಯಕ್ರಿಯಾ

ಈ ಕಲೆಯನ್ನು ವ್ಯಾಖ್ಯಾನಕಾರರು 1. ಮಾನಸೀ 2. ಕಾವ್ಯಕ್ರಿಯಾ ಎಂದು ಎರಡಾಗಿ ವಿಭಜಿಸಿದ್ದಾರೆ. ಮಾನಸೀ ಎಂದರೆ ತಮ್ಮೊಂದಿಗೆ ಮಾತನಾಡುತ್ತಿರುವವರ ಮನಸ್ಸಿನಲ್ಲಿರುವುದನ್ನು ಊಹಿಸುವ ಶಕ್ತಿ ಎಂದೂ; ಕಾವ್ಯಕ್ರಿಯಾ ಎಂದರೆ ಆಶುಕವಿತೆಗಳನ್ನು ರಚಿಸುವುದು ಎಂದೂ ಅರ್ಥ ಮಾಡಿದ್ದಾರೆ.

## 54. ಅಭಿಧಾನಕೋಶ

ಸಾಮಾನ್ಯವಾಗಿ ಬಳಸುವ ಪ್ರತಿಯೊಂದು ಶಬ್ದಕ್ಕೂ ಪರ್ಯಾಯ ಶಬ್ದವನ್ನು ಬಳಸಬಲ್ಲ ಶಕ್ತಿ ಮತ್ತು ಶಬ್ದಗಳ ವ್ಯುತ್ಪತ್ತಿ, ರೂಪ ಮತ್ತು ಅರ್ಥವನ್ನು ತಿಳಿದಿರುವುದೇ ಈ ಕಲೆ.

## 55. ಛಂದೋವಿಜ್ಞಾನ

ಕಾವ್ಯರಚನೆಗೆ ಅಗತ್ಯವಾದ ಛಂದಸ್ಸುಗಳ ಜ್ಞಾನ. ಛಂದಃ ಎಂದರೆ ಅಪೇಕ್ಷೆ, ಆಶಯ ಎಂದೂ ಅರ್ಥವಾಗುತ್ತದೆ. ದೃಷ್ಟಿಮಾತ್ರದಿಂದ ಅನ್ಯರ ಅಪೇಕ್ಷೆಯನ್ನು ಅರಿಯತಕ್ಕಶಕ್ತಿ ಎಂದಿದ್ದಾರೆ ವಲ್ಲಭರು. ಮುಖ್ಯವಾಗಿ ಪ್ರಿಯ ಪ್ರೇಯಸಿಯರು ಪರಸ್ಪರ ಮನೋಗತವನ್ನು ಅರಿತುಕೊಳ್ಳುವ ಕಲೆ ಇದೆಂದಿದ್ದಾರೆ.

## 56. ಕ್ರಿಯಾವಿಕಲ್ಪ

ಈ ಹಿಂದೆ ವಿವರಿಸಿರುವ ಕಾವ್ಯಕ್ರಿಯಾ (53) ಎಂಬ ಕಲೆಯ ಮತ್ತೊಂದು ರೂಪ ಇದೆಂದು ಕೆಲ ಭಾಷ್ಯಕಾರರು ಅಭಿಪ್ರಾಯಪಟ್ಟಿದ್ದಾರೆ,

ಆದರೆ ಸಾಮಾನ್ಯವಾಗಿ ಯಾವುದೊಂದು ಕೆಲಸವನ್ನು ಮಾಡುವಾಗ ಎಲ್ಲರೂ ಅನುಸರಿಸುವ ಕ್ರಮವನ್ನು ಬಿಟ್ಟು ತನ್ನದೇ ಆದ ರೀತಿಯಲ್ಲಿ ಕೆಲಸವನ್ನು ನಿರ್ವಹಿಸುವುದೇ ಕ್ರಿಯಾವಿಕಲ್ಪ ಎಂಬುದು ಬಹುಮತಾಭಿಪ್ರಾಯ.

### 57. ಛಲಿತಕಯೋಗ

ಕಾರ್ಯಸಾಧನೆಗಾಗಿ ವೇಷಾಂತರಗಳನ್ನು ಧರಿಸುವ ಕಲೆ ಇದು. ನಮ್ಮ ಪ್ರಾಚೀನ ಸಾಹಿತ್ಯ ಭಂಡಾರದಲ್ಲಿ ಈ ಕಲೆಯಲ್ಲಿ ಪರಿಣತರಾಗಿದ್ದವರನೇಕರ ಉಲ್ಲೇಖವಿದೆ. ಮಾರೀಚ, ರಾವಣರು ಸೀತಾಪಹರಣಕ್ಕಾಗಿ, ಪೂತನಿ, ಶಕಟರು ಕೃಷ್ಣನ ಪ್ರಾಣಹರಣಕ್ಕಾಗಿ, ಅರ್ಜುನ ಸುಭದ್ರೆಯ ಮನ ಒಲಿಸಿ ವಿವಾಹವಾಗಲು, ಪಾಂಡವರು ಅಜ್ಞಾತವಾಸಕ್ಕಾಗಿ ವೇಷಾಂತರ, ರೂಪಾಂತರಗಳನ್ನು ತಳೆದ ಕತೆಗಳು ಲೋಕಪ್ರಸಿದ್ಧವಾಗಿವೆ. ಇದೇ ರೀತಿ ಪ್ರಿಯತಮೆಯ ಮನೋಗತ ಅರಿಯಲು ಅಥವ ಪ್ರೀತಿಯ ಸಂದೇಶ ನೀಡಲು, ಪ್ರಿಯ ಸಮಾಗಮಕ್ಕೆ ರಹಸ್ಯ ವ್ಯವಸ್ಥೆ ಮಾಡಲು 'ಕೊರವಂಜಿ' 'ರತ್ನ ವ್ಯಾಪಾರಿ' ಮುಂತಾದ ವೇಷಧರಿಸುತ್ತಿದ್ದ ನಾಯಕರ ಕತೆಗಳೂ ಸಾಕಷ್ಟಿವೆ.

### 58. ವಸ್ತ್ರಗೋಪನ

ದೇಹದ ಅಂಗಾಂಗಗಳನ್ನೆಲ್ಲ ಮುಚ್ಚಿಕೊಳ್ಳುವಂತೆ ವಸ್ತ್ರ ಧರಿಸುವ ರೀತಿ ಎಂದು ಕೆಲವರು ಹರಿದ ಬಟ್ಟೆಯಾದರೂ, ಹರಕುಕಾಣದಂತೆ ಧರಿಸುವ ಬುದ್ಧಿವಂತಿಕೆ–ಎಂದು ಕೆಲವರು ವಸ್ತ್ರಗೋಪನಕ್ಕೆ ಅರ್ಥಮಾಡಿದ್ದಾರೆ. ಹತ್ತಿಯ ಬಟ್ಟೆ ರೇಷ್ಮೆಯ ಬಟ್ಟೆಯಂತೆ ಕಾಣುವ ಹಾಗೆ ಮಾಡುವ ಕಲೆ ಇದು ಎಂದು ಮತ್ತೊಬ್ಬ ಭಾಷ್ಯಕಾರರು ವಿವರಿಸಿದ್ದಾರೆ.

ಗೋಪನ–ಎಂದರೆ ಕಾಪಾಡಿಕೊಳ್ಳುವುದು, ರಕ್ಷಿಸಿಕೊಳ್ಳುವುದು ಎಂದು ಅರ್ಥವಾಗುತ್ತದೆ. ವಸ್ತ್ರಗಳಿಂದ ದೇಹವನ್ನು ಮುಚ್ಚಿಕೊಳ್ಳುವುದು ಎನ್ನುವುದಕ್ಕಿಂತ ವಸ್ತ್ರಗಳನ್ನು ಚೆನ್ನಾಗಿ ಬಾಳಿಕೆ ಬರುವಂತೆ, ಬಣ್ಣ, ಬೆಡಗು ಮಾಸದಂತೆ ಕಾಪಾಡಿಕೊಳ್ಳುವುದು ಎನ್ನುವುದು ಉಚಿತವಾದ ವಿವರಣೆ ಆದೀತು.

## 59. ದ್ಯೂತವಿಶೇಷ

ದ್ಯೂತ–ಎಂದರೆ ಜೂಜು. ಮನರಂಜನೆ ಹಾಗೂ ಬುದ್ಧಿ ಶಕ್ತಿಯ ಪರೀಕ್ಷೆ ಎರಡೂ ಸೇರುತ್ತವೆ ಈ ಕಲೆಯಲ್ಲಿ. ಯಶೋಧರ ದ್ಯೂತಗಳಲ್ಲಿ ಇಪ್ಪತ್ತು ಬಗೆ ಇವೆ ಎಂದು ಹೇಳಿ ಅವುಗಳಲ್ಲಿ 15 ನಿರ್ಜೀವ ದ್ಯೂತಗಳಲ್ಲಿ 5 ಸಜೀವ ದ್ಯೂತಗಳು ಎನ್ನುತ್ತಾನೆ. ಪಗಡೆ, ಚದುರಂಗ ಮೊದಲಾದ ಆಟಗಳು ನಿರ್ಜೀವ ದ್ಯೂತಗಳು. ಕೋಳಿಕಾಳಗ, ಕುದುರೆ ಜೂಜು ಮೊದಲಾದವು ಸಜೀವದ್ಯೂತ. ಈ ಎರಡನೆಯದನ್ನು ಈ ಹಿಂದೆ ಒಂದು ಕಲೆಯಾಗಿ (42) ಭಾಗಶಃ ವಿವರಿಸಿದೆ. ನಿರ್ಜೀವದ್ಯೂತದಲ್ಲಿ ಮತ್ತೆ ಎರಡು ವಿಧಗಳುಂಟು. 1. ಬುದ್ಧಿವಂತಿಕೆ ಆಟ (ಗೇಮ್ ಆಫ್ ಇಂಟಲಿಜನ್ಸ್) 2. ಅದೃಷ್ಟದ ಆಟ (ಗೇಮ್ ಆಫ್ ಛಾನ್ಸ್) ಎಂದು. ಚದುರಂಗ ಮೊದಲನೆ ಜಾತಿಗೂ, ಸರಿ-ಬೆಸ ದಂಥ ಊಹೆಯ ಆಟಗಳು ಎರಡನೆ ಜಾತಿಗೂ ಸೇರುತ್ತವೆ. ಈ ಹಲವು ಬಗೆಯ ಆಟಗಳಲ್ಲಿ ಪರಿಣತರೆನಿಸಿಕೊಂಡವರು ದ್ಯೂತ ವಿಶೇಷಜ್ಞರೆನಿಸಿಕೊಳ್ಳುತ್ತಿದ್ದರು. ಈಗ ಸರಕಾರದಲ್ಲಿ ನೊಂದಾಯಿಸಿದ ಕ್ಲಬ್‌ಗಳಿರುವಂತೆ ಹಿಂದೆ ಸರಕಾರದ ಮೇಲ್ವಿಚಾರಣೆಯಲ್ಲಿಯೇ ದ್ಯೂತ ಗೃಹಗಳಿರುತ್ತಿದ್ದವು. ರಾಜನು ದ್ಯೂತಾಧ್ಯಕ್ಷನೆಂಬ ಸಚಿವನನ್ನು ಪಡೆದಿರ ಬೇಕೆಂದು ಕೌಟಿಲ್ಯನು ಹೇಳುತ್ತಾನೆ. ರಾಜ್ಯದಲ್ಲಿನ ದ್ಯೂತಗೃಹಗಳ ಮೇಲ್ವಿಚಾರಣೆ ಮತ್ತು ಅವುಗಳಿಂದ ನಿರ್ದಿಷ್ಟ ಆದಾಯ ಪಡೆದ ವ್ಯವಸ್ಥೆ ದ್ಯೂತಾಧ್ಯಕ್ಷನದಾಗಿತ್ತು.

## 60. ಆಕರ್ಷಕ್ರೀಡಾ

ಇದು ದ್ಯೂತವಿಶೇಷ ಕಲೆಯ ಒಂದು ಅಂಗ. ಮೇಲೆ ತಿಳಿಸಿದ ಅದೃಷ್ಟದ ಆಟದ ಜಾತಿಗೆ ಸೇರಿದ್ದು. ಪಗಡೆ, ಚೌಕಾಬಾರ, ಮೂರೆಲೆ ಇಸ್ಪೇಟಾಟಗಳೆಲ್ಲ ಈ ಜಾತಿಯವು. ಆಕರ್ಷಕ್ರೀಡಾ ಎಂದರೆ ಪಗಡೆಯಾಟ ಎಂದೇ ಕೆಲವರು ಅರ್ಥಮಾಡಿದ್ದಾರೆ. ಆದರೆ ಆ ಬಗೆಯ ಯಾವ ಆಟವಾದರೂ ಆಗಬಹುದು.

ಪಗಡೆ ಭಾರತದ ಅತಿ ಪ್ರಾಚೀನಕಾಲದ ಜೂಜಾಟ. ಋಗ್ವೇದದಲ್ಲಿ

ಈ ಆಟದ ಪ್ರಸ್ತಾಪವಿದೆ. ಪಗಡೆಯಾಡಿ ಸೋತವನ ದುರವಸ್ಥೆ ಮನೋಜ್ಞವಾಗಿ ಬಣ್ಣಿಸಲ್ಪಟ್ಟಿರುವ 'ಅಕ್ಷಸೂತ್ರ' ಎಂಬ ಸೂಕ್ತವೇ ಇದೆ. ನಳ, ಧರ್ಮರಾಜರು ಪಗಡೆಯಾಡಿ ಸೋತು ಪಟ್ಟ ಪಾಡು ಅಪೂರ್ವ ಕಥಾ ವಸ್ತುವೇ ಆಗಿಲ್ಲವೆ ?

ಆಕರ್ಷಕ್ರೀಡಾ ಎಂದರೆ ಅಭಿಚಾರ ಪ್ರಯೋಗಗಳಲ್ಲಿ ಒಂದಾದ ಆಕರ್ಷಣತಂತ್ರ ಎಂದು ಕೆಲವರು ಅರ್ಥಮಾಡಿದ್ದಾರೆ. ತನ್ನ ಎದುರಾಳಿಯ ನ್ನಾಗಲಿ, ಅಥವಾ ಹೆಣ್ಣನ್ನಾಗಲಿ ತನ್ನತ್ತ ಆಕರ್ಷಿಸುವ ಮಂತ್ರಶಕ್ತಿಯನ್ನು ಪ್ರಯೋಗಿಸುವ ಈ ವಿದ್ಯೆಗೆ ವಶೀಕರಣ ಎಂದೂ ಹೆಸರುಂಟು.

## 61. ಬಾಲಕ್ರೀಡನಕ

ಮಕ್ಕಳ ಆಟ, ಪಾಟ, ವಿನೋದಗಳನ್ನು ವ್ಯವಸ್ಥೆ ಮಾಡುವುದು, ಆಟದ ಸಾಮಾನುಗಳನ್ನು ತಯಾರಿಸುವುದು ಮುಂತಾದವುಗಳು ಬಾಲಕ್ರೀಡನಕ ಎಂದೆನಿಸುತ್ತದೆ.

## 62. ವೈನಯಿಕ

ಆನೆ, ಕುದುರೆ ಮುಂತಾದ ಪ್ರಾಣಿಗಳಿಗೆ ಸೇವಾ ಚಾತುರ್ಯವನ್ನು ಕಲಿಸುವ ವಿಧಾನವೆಂದು ಕೆಲವರು ಇದಕ್ಕೆ ಅರ್ಥಮಾಡಿದ್ದಾರೆ. ಇಚ್ಛಿತ ಸ್ಥಳಕ್ಕೆ ಶೀಘ್ರವಾಗಿ ಸೇರುವ ಸಿದ್ಧಿ ಎಂದು ಮತ್ತೆ ಕೆಲವರು ಅರ್ಥ ಮಾಡಿದ್ದಾರೆ.

ಆದರೆ ವಿನಯಕ್ಕೆ ಸಂಬಂಧಿಸಿದ ಕಲೆ ಎನ್ನುವುದು ಉಚಿತವಾದ ಅರ್ಥ. ಶಿಕ್ಷೆಯ ಭಯವಿಲ್ಲದೆ ಸ್ಥಾನೋಚಿತವಾದ ವಿನಯ, ವಿನೀತ ಭಾವ, ಸಭ್ಯತೆ, ಸೌಜನ್ಯ, ಅನುನಯ, ಆದರಣೆ, ದಾಕ್ಷಿಣ್ಯ, ಮರ್ಯಾದೆಗಳನ್ನು ತೋರುವ ವಿದ್ಯೆಯೇ ವೈನಯಿಕ ಕಲೆ ಎನಿಸುತ್ತದೆ. ಹಿರಿಯರು ಗುರುಗಳು, ಮೇಲಧಿ ಕಾರಿಗಳು, ಮಿತ್ರರು, ಸಹೋದ್ಯೋಗಿಗಳು ಸೇವಕರು, ಅತಿಥಿಗಳು ಮೊದ ಲಾದವರೊಂದಿಗೆ ವರ್ತಿಸಬೇಕಾದ, ಮಾತನಾಡಬೇಕಾದ ಸೌಜನ್ಯಪೂರ್ಣವಾದ

ರೀತಿ, ನೀತಿಗಳು ಸಮಾಜ ಜೀವನದಲ್ಲಿ ಅತಿಮುಖ್ಯವಾದವುಗಳಾಗಿದ್ದು ಇದನ್ನು ಶಿಕ್ಷಣದ ಅಂಗವಾಗಿಯೇ ಕಲಿಸಲಾಗುತ್ತಿತ್ತು.

## 63. ವೈಜಯಿಕ

ಕಾರ್ಯಸಿದ್ಧಿಯನ್ನು ಅರ್ಥಾತ್ ವಿಜಯವನ್ನುಗಳಿಸುವ ಕಲೆ. ಇದು ದೈವೀ, ಮಾನುಷೀ ಎಂದು ಎರಡು ರೀತಿ. ದೇವತಾನುಗ್ರಹಪಡೆದು ವಿಜಯಸಾಧಿಸುವುದು ದೈವೀ, ಮಂತ್ರ ಶಕ್ತಿ, ಅಭಿಚಾರ ಪ್ರಯೋಗಗಳಿಂದ ಗಳಿಸುವ ವಿಜಯವೂ ಈ ಜಾತಿಗೇ ಸೇರಿದುದೆಂದು ಕೆಲವರ ಅಭಿಮತ. ಮಾನವನ ಬುದ್ಧಿ ಶಕ್ತಿ, ದೇಹಶಕ್ತಿಗಳಿಂದಗಳಿಸುವ ವಿಜಯವು ಮಾನುಷೀ. ಯುದ್ಧಗಳಲ್ಲಿ ಶಸ್ತ್ರಾಸ್ತ್ರಗಳನ್ನು ಬಳಸುವ ವಿಧಿವಿಧಾನಗಳೂ ವೈಜಯಿಕ ಕಲೆಯೇ ಎನ್ನಬಹುದು.

## 64. ವ್ಯಾಯಾಮಿಕ

ದೇಹದಾರ್ಢ್ಯವನ್ನೂ, ಆರೋಗ್ಯವನ್ನು ಕಾಪಾಡಿಕೊಳ್ಳಲು ಮಾಡುವ ವ್ಯಾಯಾಮ ವಿದ್ಯೆ. ಚಂಕ್ರಮಣ, ದಂಡೆಯೊತ್ತುವುದು, ಯೋಗಾಸನಗಳು, ಕುಸ್ತಿ, ಓಡುವುದು ಮೊದಲಾದವೆಲ್ಲ ಈ ಕಲೆಗೆ ಸಂಬಂಧಿಸಿದವುಗಳೇ ಆಗಿವೆ.

# ಉಪಸಂಹಾರ

---

ಇದು ವಾತ್ಸ್ಯಾಯನ ಕಾಮಸೂತ್ರದಲ್ಲಿ ಹೇಳಿರುವ 64 ಕಲೆಗಳ ಒಂದು ಸ್ಥೂಲ ವಿವರಣೆ. ಪೀಠಿಕೆಯಲ್ಲಿಯೇ ಹೇಳಿರುವಂತೆ 64 ಕಲೆಗಳ ಪಟ್ಟಿ ಮಾಡಿಕೊಟ್ಟಿರುವವರಲ್ಲಿ ವಾತ್ಸ್ಯಾಯನನೇ ಮೊದಲಿಗನೂ ಅಲ್ಲ, ಕಡೆಯವನೂ ಅಲ್ಲ. ಆದರೆ ವಾತ್ಸ್ಯಾಯನನ ಅನಂತರದ ಬಹುಪಾಲು ವ್ಯಾಖ್ಯಾನಕಾರರು ಈ ಪಟ್ಟಿಯನ್ನೇ ಹೆಚ್ಚಾಗಿ ಅವಲಂಬಿಸಿರುವುದರಿಂದ ಇದೇ ಅಧಿಕೃತ ಪಟ್ಟಿ ಎಂಬ ಭಾವನೆ ಬೆಳೆದಿದೆ. ವಸ್ತುತಃ ವಾತ್ಸ್ಯಾಯನ ಪಟ್ಟಿಮಾಡಿರುವ ರೀತಿ ಯಲ್ಲಿ ಒಂದು ಕ್ರಮಸಹ ಇಲ್ಲ. ಲಲಿತ ಕಲೆಗಳು, ಅಲಂಕರಣ ಕಲೆಗಳು, ವೃತ್ತಿ ಕಲೆಗಳು, ಸಾಹಿತ್ಯ, ಮನರಂಜನೆ, ಕ್ರೀಡೆ ಮೊದಲಾದವುಗಳೆಲ್ಲ ಕಲ್ಲಾ ಬಿಲ್ಲಿಯಾಗಿ ಒಂದೆಡೆ ಕಲೆ ಹಾಕಿದಂತಾಗಿದೆ. ಅಂತೆಯೇ ವಾಸ್ತುಶಿಲ್ಪವನ್ನು ಸೇರಿಸಿರುವ ಈ ಪಟ್ಟಿಯಲ್ಲಿ ವಿಗ್ರಹ ಶಿಲ್ಪದ ಉಲ್ಲೇಖವಿಲ್ಲ. 36ನೆಯದಾದ 'ತಕ್ಷಣ'ವೇ ವಿಗ್ರಹಶಿಲ್ಪವೆಂದು ಕೆಲವರೆನ್ನುತ್ತಾರಾದರೂ ಅದು ಮುಖ್ಯವಾಗಿ ಮರಗೆಲಸಕ್ಕೆ ಸಂಬಂಧಿಸಿದ ವಿದ್ಯೆಯೇ ವಿನಾ ಕಲ್ಲು, ಲೋಹ, ಮಣ್ಣಿನಿಂದ ವಿಗ್ರಹಗಳನ್ನು ರಚಿಸುವುದಲ್ಲ. ಇದೇ ರೀತಿ ವೃಕ್ಷಾಯುರ್ವೇದವಿದ್ದರೂ ಆಯುರ್ವೇದವಿಲ್ಲ ; ನಿಮಿತ್ತಜ್ಞಾನವಿದ್ದರೂ ಜ್ಯೋತಿಷ್ಯ, ಸಾಮುದ್ರಿಕಾದಿ ಗಳ ಪ್ರಸ್ತಾಪವಿಲ್ಲ. ಈ ಎಲ್ಲ ಕಾರಣಗಳಿಂದ ಈ ಪಟ್ಟಿ ಅಪೂರ್ಣ ಎಂಬ ಭಾವನೆ ಮೂಡುವುದು ಸ್ವಾಭಾವಿಕ.

ಇಲ್ಲಿ ಪಟ್ಟಿಮಾಡಿರುವ ಕಲೆಗಳು ಸಾಮಾನ್ಯವಾಗಿ ಜೀವನದ ಎಲ್ಲ ಕ್ಷೇತ್ರಗಳನ್ನೂ ಪ್ರತಿನಿಧಿಸುತ್ತದೆ ಎಂಬುದು ನಿಜವಾದರೂ ಈ ಒಂದೊಂದನ್ನೂ ಇನ್ನೂ ವಿಭಜಿಸಿ ಪಟ್ಟಿ ಬೆಳೆಸುವುದು ಸಾಧ್ಯ. ಇದನ್ನೇ ಕೆಲ ಗ್ರಂಥಕರ್ತರು ಮಾಡಿದ್ದಾರೆ. ಯಶೋಧರನೇ ಈ ರೀತಿ ವಿಭಜಿಸಿದರೆ 512 ಕಲೆಗಳಾಗುತ್ತವೆ ಎಂದಿದ್ದಾನೆ.

# ಅನುಬಂಧ

ಪ್ರಾಚೀನ ಭಾರತೀಯ ಸಾಹಿತಿಗಳು ಮತ್ತು ವ್ಯಾಖ್ಯಾನಕರ್ತರು 64 ಕಲೆಗಳೆಂದು ಹೆಸರಿಸಿರುವ ಪಟ್ಟಿಗಳಲ್ಲಿ ವೈವಿಧ್ಯತೆ, ವ್ಯಾಪ್ತಿಗಳ ಪರಿಚಯ ಮಾಡಿಕೊಡಲು ಕೆಲ ಆರಿಸಿದ ಪಟ್ಟಿಗಳನ್ನು ಈ ಕೆಳಗೆ ಕೊಡಲಾಗಿದೆ. ಡಾ॥ ವೆಂಕಟಸುಬ್ಬಯ್ಯನವರು ತಮ್ಮ ಪುಸ್ತಕದಲ್ಲಿ 10 ಪಟ್ಟಿಗಳನ್ನು ಈ ಕೆಳಗಿನ ಕ್ರಮದಲ್ಲಿ ಕೊಟ್ಟಿದ್ದಾರೆ:

| | | |
|---|---|---|
| 1. | ಸಮಯಾವಸೂತ್ರ | 87 ಕಲೆಗಳು |
| 2. | ಲಲಿತವಿಸ್ತರ | 86 |
| 3. | ವಾತ್ಸ್ಯಾಯನ ಕಾಮಸೂತ್ರ | 64 |
| 4. | ಕಾದಂಬರಿ | 48 |
| 5. | ವಾತ್ಸ್ಯಾಯನ ಕಾಮಸೂತ್ರ ಪಾಂಚಾಲ ಕಲೆಗಳು | 64+40 |
| 6. | ವಾತ್ಸ್ಯಾಯನ ಕಾಮಸೂತ್ರ ಯಶೋಧರ | 64 |
| 7. | ಚಂಪು ರಾಮಾಯಣ | 64 |
| 8. | ಶುಕ್ರನೀತಿಸಾರ | 64 |
| 9. | ಕಲ್ಪಾಂತರ ವಾಚ್ಯಾನಿ | 72 |
| 10. | ಸೂತ್ರಾಲಂಕಾರ | 47 |

ಕಲ್ಪಾಂತರ ವಾಚ್ಯಾನಿಯಲ್ಲಿ 'ಮಹಿಳಾ ಗುಣ' ಎಂದು ಹೇಳಿರುವ 64 ಕಲೆಗಳನ್ನು ಅನುಬಂಧದಲ್ಲಿ ಕೊಡಲಾಗಿದೆ.

ಈ ಎಲ್ಲವುಗಳನ್ನೂ ಕಾಲಮಾನದ ದೃಷ್ಟಿಯಿಂದ ಯಾವುದು ಮೊದಲು ಯಾವುದು ಅನಂತರ-ಎಂದು ಖಚಿತವಾಗಿ ಹೇಳುವುದು ಸಾಧ್ಯವಾಗಿಲ್ಲ. ಬೇರೆ ಬೇರೆ ಆಧಾರಗಳಿಂದ ಬಹುಶಃ ಸಮಯಾವಸೂತ್ರವೇ ಅತ್ಯಂತ ಹಿಂದಿನದು

ಎಂದು ಊಹಿಸಲಾಗಿದೆ. ಇದರ ಕಾಲ ಸುಮಾರು ಕ್ರಿ.ಪೂ. 300 ಇರಬಹುದು. ಲಲಿತವಿಸ್ತರ ಕ್ರಿ.ಪೂ. ಮೊದಲನೆ ಶತಮಾನದಲ್ಲಿ ರಚಿತವಾಗಿರಬಹುದು ಎನ್ನಲಾಗಿದೆ.

ವಾತ್ಸ್ಯಾಯನ ಭವಭೂತಿಗಿಂತ ಹಿಂದಿನವನು. ಕಾಳಿದಾಸನಿಗಿಂತಲೂ ಹಿಂದಿನವನು ಎಂಬ ವಾದವೂ ಉಂಟು. ಕಾಳಿದಾಸನ ಕಾಲ ಕ್ರಿ.ಪೂ. ಮೊದಲನೆ ಶತಮಾನವಾದರೆ, ವಾತ್ಸ್ಯಾಯನ ಇನ್ನೂ ಮೊದಲಿಗನಾಗುತ್ತಾನೆ. ವಾತ್ಸ್ಯಾಯನ ಕಾಮಸೂತ್ರದಲ್ಲಿನ ಪಾಂಚಾಲ ಕಲಾ ಎಂಬುದು ಅವನಿಗಿಂತ ಪೂರ್ವದಲ್ಲೇ ರಚಿತವಾದುದು.

ಡಾ॥ ವೆಂಕಟಸುಬ್ಬಯ್ಯನವರ ಪುಸ್ತಕದಲ್ಲಿ ಇಲ್ಲದಿರುವ ಲಲಿತಾ ಸಹಸ್ರ ನಾಮ ಭಾಷ್ಯ ಮತ್ತು ಅಭಿಲಷಿತಾರ್ಥ ಚಿಂತಾಮಣಿಯಲ್ಲಿ ಉಲ್ಲೇಖಿಸಿರುವ ಪಟ್ಟಿಗಳನ್ನೂ ಇಲ್ಲಿ ಕೊಡಲಾಗಿದೆ.

1. ಸಮಯಾವಸೂತ್ರದಲ್ಲಿ 87 ಕಲೆಗಳನ್ನು ಪಟ್ಟಿಮಾಡಲಾಗಿದೆ. ಇವುಗಳಲ್ಲಿ 17 ಮಾತ್ರ ವಾತ್ಸ್ಯಾಯನನ ಪಟ್ಟಿಯಲ್ಲಿಯೂ ಇವೆ. ಉಳಿದವು ಗಳಲ್ಲಿ ಒಂದೇ ಕಲೆಯನ್ನು ವಿಭಜಿಸಿ ಬೇರೆ ಬೇರೆ ಹೆಸರುಗಳಿಂದ ಕರೆದಿರುವುದೂ, ಉದಾಹರಣೆ : ಯುದ್ಧಮ್, ಬಾಹುಯುದ್ಧಮ್, ದಂಡಯುದ್ಧಮ್, ಮುಷ್ಟಿಯುದ್ಧಮ್, ಅಟ್ಟಿಜುದ್ಧಮ್ (ಮೂಳೆಗಳಿಂದ ಯುದ್ಧ)–ಉಂಟು.

2. ಲಲಿತವಿಸ್ತರದಲ್ಲಿ 86 ಕಲೆಗಳಿವೆ. ಇವುಗಳಲ್ಲಿ ವೇದ ವೇದಾಂಗ ಗಳಾದ ಶಿಕ್ಷಾ, ವ್ಯಾಕರಣಗಳು, ಅರ್ಥಶಾಸ್ತ್ರ, ಕಾವ್ಯಾಲಂಕಾರಗಳೂ ಸೇರಿಸಲ್ಪಟ್ಟಿವೆ. ಯುದ್ಧ ಹಾಗೂ ಶಸ್ತ್ರಾಸ್ತ್ರಗಳ ವಿನಿಯೋಗ, ಮುಷ್ಟಿ ಹಿಡಿಯುವ ರೀತಿ, ಜುಟ್ಟು ಕಟ್ಟುವುದು ಮೊದಲಾದವುಗಳನ್ನೆಲ್ಲ 'ಕಲೆ'ಗಳೆನ್ನ ಲಾಗಿದೆ. ಹಡಗು-ದೋಣಿ ನಡೆಸುವುದನ್ನೂ ಈ ಪಟ್ಟಿಯಲ್ಲಿ ಸೇರಿಸಿರುವುದು ಗಮನಾರ್ಹ.

3. ವಾತ್ಸ್ಯಾಯನ ಕಾಮಸೂತ್ರದಲ್ಲಿ ಸೂತ್ರಕಾರನಾದ ವಾತ್ಸ್ಯಾಯನ ಪಟ್ಟಿ ಮಾಡಿರುವ 64 ಕಲೆಗಳನ್ನೇ ಈ ಪುಸ್ತಕದಲ್ಲಿ ವಿವರಿಸಿರುವುದು. ಈ

ಅರವತ್ತು ನಾಲ್ಕಲ್ಲದೆ ಇನ್ನೂ ಎರಡು ಪಟ್ಟಿಗಳಿವೆ. ಅವುಗಳಲ್ಲಿ ಮೊದಲ
ಯದು ಪಾಂಚಾಲಕಲೆಗಳೆಂದು ಕರೆಯಲಾಗಿರುವ ರತಿಶಾಸ್ತ್ರಕ್ಕೆ ಸಂಬಂಧಿಸಿದ್ದು
ಇದು ವಾತ್ಸ್ಯಾಯನನ ಕಾಲಕ್ಕಿಂತ ಬಹಳ ಹಿಂದಿನದು ಎಂದು ವ್ಯಾಖ್ಯಾ
ಕಾರರ ಮತ.

**ಪಾಂಚಾಲ ಕಲೆಗಳು – 64**

| | | | |
|---|---|---|---|
| ಆಲಿಂಗನ : | ಸ್ಪೃಷ್ಟಕಮ್ | ಲತಾವೇಷ್ಟಿತಕಮ್ | |
| | ವಿದ್ಧಕಮ್ | ವೃಕ್ಷಾಧಿರೂಢಕಮ್ | |
| | ಉದ್ಘೃಷ್ಟಕಮ್ | ತಿಲ ತಂಡುಲಕಮ್ | |
| | ಪೀಡಿತಕಮ್ | ಕ್ಷೀರ ನೀರಕಮ್ | 8 |
| ಚುಂಬನಮ್ : | ಸಮಮ್ | ಉದ್ಭ್ರಾಂತಮ್ | |
| | ತಿರ್ಯಕ್ | ಅವಪೀಡಿತಕಮ್ | 4 |
| ದಂತಕರ್ಮ : | ಗೂಟಕಮ್ | ಪ್ರವಾಸಮಣಿಃ | |
| | ಉಚ್ಛೂನಕಮ್ | ಮಣಿಮಾಲಾ | |
| | ಬಿಂದುಃ | ಖಂಡಾಭ್ರಕಮ್ | |
| | ಬಿಂದುಮಾಲಾ | ವರಾಹಚರ್ವಿತಕಮ್ | 8 |
| ನಖಕ್ಷತಮ್ : | ಆಚ್ಛುರಿತಕಮ್ | ವ್ಯಾಘ್ರನಖಮ್ | |
| | ಅರ್ಧಚಂದ್ರಃ | ಮಯೂರಪದಕಮ್ | |
| | ಮಂಡಲಮ್ | ಶತಪ್ಲುತಕಮ್ | |
| | ರೇಖಾ | ಉತ್ಪಲಪತ್ರಕಮ್ | 8 |
| ಸೀತ್ಕೃತಮ್ : | ಹಿಂಕಾರಃ | ಸೂತ್ಕೃತಮ್ | |
| | ಸ್ತನಿತಮ್ | ದೂತ್ಕೃತಮ್ | |
| | ಕೂಡಿತಮ್ | ಫೂತ್ಕೃತಮ್ | |
| | ರುದಿತಮ್ | ಅಂಬಾರ್ಥಶಬ್ದಮ್ | 8 |
| ಸಂವೇಶನಮ್ : | ಉತ್ಫುಲಕಮ್ | ಸಂಪುಟಕಮ್ | |
| | ವಿಜೃಂಭಿತಕಮ್ | ಪೀಡಿತಕಮ್ | |
| | ಇಂದ್ರಾಣಿಕಮ್ | ವೇಷ್ಟಿತಕಮ್ | |

| | | | |
|---|---|---|---|
| | ವಾಟವಕಮ್ | | 7 |
| ಉಪಸೃಪ್ತಕಮ್ : | ಉಪಸೃಪ್ತಕಮ್ | ನಿರ್ಘಾತಃ | |
| | ಮಂಥನಮ್ | ವರಾಹಘಾತಃ | |
| | ಹುಲಃ | ವೃಷಾಘಾತಃ | |
| | ಅವಮರ್ಧನಮ್ | ಚಟಕ ವಿಲಸಿತಮ್ | |
| | ಪೀಡಿತಕಮ್ | ಸಂಪುಟಃ | 10 |
| ನರಾಯಿತಮ್ : | ಸಂದಂಶಃ | | |
| | ಭ್ರಮರಕಃ | | |
| | ಪುಂಖೇಲಿತಕಮ್ | | 3 |
| ಔಪರಿಷ್ಟಕಮ್ : | ನಿಮಿತಮ್ | ಚುಂಬಿತಕಮ್ | |
| | ಪಾರ್ಶ್ವತೋದಷ್ಟಮ್ | ಪರಿಮೃಷ್ಟಕಮ್ | |
| | ಬಹಿಸ್ಸಂದಂಶಃ | ಆಮ್ರಚೂಷಿತಕಮ್ | |
| | ಅಂತಃಸಂದಂಶಃ | ಸಂಗರಃ | 8 |

ಈ ಅರವತ್ತು ನಾಲ್ಕಕ್ಕೆ ಮತ್ತೂ 40ನ್ನು ವಾತ್ಸ್ಯಾಯನ ಸೇರಿಸಿದ್ದಾನೆ ಅವು :

1. ಊರೂಪಗೂಹನಮ್
2. ಜಘನೋಪಗೂಹನಮ್
3. ಸ್ತನಾಲಿಂಗನಮ್
4. ಲಲಾಟಿಕಾ
5. ಸಮಮ್
6. ಪೀಡಿತಕಮ್
7. ಅಂಚಿತಮ್
8. ಮೃದು
9. ಭುಗ್ನಕಮ್
10. ಜೃಂಭಿತಕಮ್
11. ಉತ್ಪೀಡಿತಕಮ್
12. ಅರ್ಧಪೀಡಿತಕಮ್
13. ವೇಣುದಾರಿತಕಮ್
14. ಶೂಲಾಚಿತಕಮ್
15. ಕರ್ಕಟಕಮ್
16. ಪೀಡಿತಕಮ್
17. ಪರಾವೃತ್ತಕಮ್
18. ಸ್ಥಿತಮ್
19. ಅವಲಂಬಿತಕಮ್
20. ಧೇನುಕಮ್
21. ಶೌನಮ್
22. ಏಣೇಯಮ್
23. ಛಾಗಲಮ್
24. ಗರ್ದಭಾಕ್ರಾಂತಮ್
25. ಮಾರ್ಜಾರಲಲಿತಕಮ್
26. ವ್ಯಾಘ್ರವಸ್ಕಂದಿತಮ್
27. ಗಜೋಪಮರ್ದಿತಮ್
28. ವರಾಹಘೃಷ್ಟಕಮ್
29. ತುರಗಾಧಿರೂಢಕಮ್
30. ಸಂಘಾಟಕಮ್
31. ಗೋಯೂಥಿಕಮ್
32. ವಾರಿಕ್ರೀಡಿತಕಮ್
33. ಅಪಹಸ್ತಕಮ್
34. ಪ್ರಸೃತಕಮ್

35. ಮುಷ್ಟಿಃ
36. ಸಮತಲಮ್
37. ಕೀಲಾ
38. ಕರ್ತರೀ
39. ವಿದ್ಧಾ
40. ಸಂದಂಶ್ರಿಕಾ

ಇವುಗಳಲ್ಲಿ 1–4 ಆಲಿಂಗನ, 5–8 ಚುಂಬನ, 9–17 ಸಂಸೇವನ, 18–32 ಉಪಸ್ಪೃಷ್ಟ, 33–40 ಪ್ರಹಣನ–ಎಂದು ವಿಭಜಿಸಿದೆ.

ಕಾಮಸೂತ್ರದ ವ್ಯಾಖ್ಯಾನಕಾರನಾದ ಯಶೋಧರನು ಮೇಲಿನ ಎರಡೂ ಪಟ್ಟಿಗಳಲ್ಲಿರುವ ಕೆಲವನ್ನಾರಿಸಿ ತನ್ನದೇ ಆದ ಮೂರನೆಯ ಪಟ್ಟಿಯೊಂದನ್ನು ರೂಪಿಸಿದ್ದಾನೆ. ಈ ಪಟ್ಟಿಯನ್ನು (1) ಕರ್ಮಾಶ್ರಯ ವಾದವು (24) ದ್ಯೂತಾಶ್ರಯವಾದವು (20) ಶಯನೋಪಚಾರ (16) ಉತ್ತರ ಕಲಾ (4) ಎಂದು ವಿಭಜಿಸಿದ್ದಾನೆ.

1. ಕರ್ಮಾಶ್ರಯಾಃ–24

1 ಗೀತಮ್
2 ನೃತ್ಯಮ್
3 ವಾದ್ಯಮ್
4 ಲಿಪಿಜ್ಞಾನಮ್
5 ವಚನಂ ಚೋದಾನಂ = ಸೌಜನ್ಯದ ಮಾತು
6 ಚಿತ್ರವಿಧಿ – ಚಿತ್ರಕಲೆ
7 ಪುಸ್ತಕರ್ಮ – ಬಟ್ಟೆಯ ಮೇಲೆ ಚಿತ್ರ ರಚನೆ
8 ಪತ್ರಚ್ಛೇದ್ಯಮ್
9 ಮಾಲ್ಯವಿಧಿ
10 ಆಸ್ವಾದ್ಯ ವಿಧಾನಂ = ಪಾಕಶಾಸ್ತ್ರ
11 ರತ್ನಪರೀಕ್ಷಾ
12 ಸೀವ್ಯಮ್ – ಹೊಲಿಗೆ
13 ರಂಗಪರಿಜ್ಞಾನಮ್
14 ಉಪಕರಣಕ್ರಿಯಾ – ಯಂತ್ರನಿರ್ಮಾಣ
15 ಮಾನವಿಧಿ = ಅಳತೆ
16 ಆಜೀವ ಜ್ಞಾನಮ್ = ಜೀವನಮಾಡುವ ರೀತಿ
17 ತಿರ್ಯಗ್‌ಯೋನಿ ಚಿಕಿತ್ಸಂ – ಪಶುವೈದ್ಯ
18 ಮಾಯಾಕೃತಂ-ಪಾಷಂಡ ಸಮಯ ಜ್ಞಾನಂ = ಭ್ರಮೆ ಉಂಟು ಮಾಡುವ ವಿದ್ಯೆ
19 ಕ್ರೀಡಾಕೌಶಲಮ್
20 ಲೋಕಜ್ಞಾನಮ್
21 ವೈಚಕ್ಷಣ್ಯಮ್ – ವಿಚಕ್ಷಣೆ
22 ಸಂವಾಹನಮ್ – ಮೈ ತಿಕ್ಕುವುದು
23 ಶರೀರ ಸಂಸ್ಕಾರ
24 ವಿಶೇಷ ಕೌಶಲಮ್

## 2. ದ್ಯೂತಾಶ್ರಯವಾದವು–20 ; ಇವುಗಳಲ್ಲಿ 15 ನಿರ್ಜೀವ ದ್ಯೂತಗಳು :

25 ಆಯುಃ ಪ್ರಾಪ್ತಿ
26 ಅಕ್ಷವಿಧಾನಮ್
27 ರೂಪಸಂಖ್ಯಾ
28 ಕ್ರಿಯಾಮಾರ್ಗಃ
29 ಬೀಜಗ್ರಹಣಮ್
30 ನಯಜ್ಞಾನಮ್
31 ಕರಣಾದಾನಮ್
32 ಚಿತ್ರಾಚಿತ್ರವಿಧಿ
33 ಗೂಢರಾಶಿಃ
34 ತುಲ್ಯಾಭಿಹಾರಃ
35 ಕ್ಷಿಪ್ರಗ್ರಹಣಮ್
36 ಅನುಪ್ರಾಪ್ತಿಲೇಖಾಸ್ಮೃತಿಃ
37 ಅಗ್ನಿಕ್ರಮಃ
38 ಛಲವ್ಯಾಮೋಹನಂ
39 ಗೃಹದಾನಮ್

### ಸಜೀವದ್ಯೂತಗಳು–5

40 ಉಪಸ್ಥಾನ ವಿಧಿ
41 ಯುದ್ಧಮ್
42 ರುತಮ್
43 ಗತಮ್
44 ನೃತ್ತಮ್

## 3. ಶಯನೋಪಚಾರಗಳು–16

45 ಪುರುಷಸ್ಯಭಾವಗ್ರಹಣಂ
46 ಸ್ವರಾಗ ಪ್ರಕಾಶನಮ್
47 ಪ್ರತ್ಯಂಗದಾನಮ್
48 ನಖದಂತಯೋರ್ವಿಚಾರೈಃ
49 ನೀವೀ ಸ್ರಂಸನಮ್
50 ಗುಹ್ಯಸಂಸ್ಪರ್ಶನಾನುಲೋಮ್ಯಮ್
51 ಪರಮಾರ್ಥ ಕೌಶಲಮ್
52 ಹರ್ಷಣಮ್
53 ಸಮಾನಾರ್ಥತಾ ಕೃತಾರ್ಥತಾ
54 ಅನುಪ್ರೋತ್ಸಾಹನಂ
55 ಮೃದುಕ್ರೋಧ ಪ್ರದರ್ಶನಮ್
56 ಸಮ್ಯಕ್ ಕ್ರೋಧ ನಿವರ್ತನಮ್
57 ಕೃದ್ಧ ಪ್ರಸಾದನಮ್
58 ಸುಪ್ತ ಪರಿತ್ಯಾಗಃ
59 ಚರಮಸ್ವಾಪನಿಧಿ
60 ಗುಹ್ಯಗೂಹನಂ

## 4. ಉತ್ತರ ಕಲೆಗಳು–4

61 ಸಾಶ್ರುಪಾತಂ ರಮಣಾಯ ಶಾಪನಮ್
62 ಸ್ವಶಪಥಕ್ರಿಯಾ
63 ಪ್ರಸ್ಥಿತಾನುಗಮನಮ್
64 ಪುನಃಪುನರ್ನಿರೀಕ್ಷಣಮ್

## ರಾಮಚಂದ್ರನ ಚಂಪೂ ರಾಮಾಯಣ ವ್ಯಾಖ್ಯಾನ

ವಿದರ್ಭರಾಜನ ಚಂಪೂರಾಮಾಯಣವನ್ನು ಲಕ್ಷ್ಮಣ ಕವಿ ಮುಂದುವರೆಸಿದ. ಲಕ್ಷ್ಮಣ ಕವಿಯು ಕಾವ್ಯಭಾಗವನ್ನು ರಾಮಚಂದ್ರನೆಂಬುವನು ವ್ಯಾಖ್ಯಾನ ಮಾಡಿದ್ದಾನೆ. ಈ ವ್ಯಾಖ್ಯಾನದಲ್ಲಿ 64 ಕಲೆಗಳ ಒಂದು ಪಟ್ಟಿ ಇದೆ.

1 ಇತಿಹಾಸಾಗಮಾದ್ಯಾಃ = ಇತಿಹಾಸ ಆಗಮಗಳ ಜ್ಞಾನ
2 ಕಾವ್ಯಾಲಂಕಾರ ನಾಟಕಮ್
3* ಗಾಯಕತ್ವಮ್
4 ಕವಿತ್ವಮ್
5 ಕಾಮಶಾಸ್ತ್ರಮ್
6 ದುರೋದರಂ = ಜೂಜಾಡುವುದು
7 ದೇಶಭಾಷಾಜ್ಞಾನಮ್
8 ಲಿಪಿಜ್ಞಾನಮ್
9 ಲಿಪಿ ಕರ್ಮ = ಲೆಪ್ಪ ಹಾಕುವ ಕಲೆ
10 ವಾಚಕಮ್
11* ಸರ್ವಾಣಿ ಅಪದಾನಾನಿ = ಪ್ರಾಚೀನ ದಾಖಲೆಗಳ ಜ್ಞಾನ
12 ಸ್ವರಶಾಸ್ತ್ರಮ್
13 ಶಾಕುನಮ್ = ಶಕುನಶಾಸ್ತ್ರ
14 ಸಾಮುದ್ರಿಕಮ್
15 ರತ್ನಶಾಸ್ತ್ರಮ್
16* ರಥಗತಿ ಕೌಶಲಮ್
17* ಅಶ್ವಗತಿ ಕೌಶಲಮ್
18 ಮಲ್ಲಶಾಸ್ತ್ರಮ್
19 ಸೂದಕರ್ಮ = ಅಡಿಗೆ ಮಾಡುವ ಕಲೆ
20* ಭೂರುಹಾಣಾಂ ದೋಹದಮ್ = ಗಿಡಗಳನ್ನು ಕಸಿಮಾಡುವುದು
21 ಗಂಧವಾದ = ಭಸ್ಮಗಳನ್ನು ಮಾಡುವುದು ಗಂಧಕಶುದ್ಧಿ ಇತ್ಯಾದಿ
22 ಧಾತುವಾದ = ಲೋಹ ಭಸ್ಮಗಳನ್ನು ಮಾಡುವುದು
23 ಖನ್ಯಾವಾದಃ = ನಿಧಿ ಶೋಧನೆ
24 ರಸವಾದಃ = ಪಾದರಸ ಶುದ್ಧಿ. ಭಸ್ಮ ಮಾಡುವಿಕೆ
25* ಜಾಲವಾದಃ
26 ಅಗ್ನಿಸ್ತಂಭಃ
27* ಖಡ್ಗಸ್ತಂಭಃ
28 ಜಲಸ್ತಂಭಃ
29* ವಾಚಸ್ತಂಭಃ
30* ವಯಸ್ತಂಭಃ
31 ವಶ್ಯಮ್ = ವಶೀಕರಣ ವಿದ್ಯೆ
32 ಆಕರ್ಷಣಮ್
33 ವಿದ್ವೇಷಣಮ್
34 ಉಚ್ಚಾಟನಮ್
35 ಮಾರಣಮ್
36 ಕಾಲವಂಚನಮ್ = ಆಯುಸ್ಸನ್ನು ಹೆಚ್ಚಿಸಿಕೊಳ್ಳುವ ವಿದ್ಯೆ
37 ಪಯಸಿ ಪ್ಲವಚಾತುರ್ಯಮ್ = ನೀರಿಗೆ ಧುಮುಕಿ ಈಜುವ ಚಾತುರ್ಯ
38 ಪಾದುಕಾ ಸಿದ್ಧಿ
39* ಮೃತ್ಸಿದ್ಧಿ = ಮಣ್ಣಿನಿಂದ ಬೇಕಾದುದನ್ನು ಸೃಷ್ಟಿಸುವ ಯಕ್ಷಿಣಿ ವಿದ್ಯೆ
40 ಘಟಿಕಾ ಸಿದ್ಧಿ

41 ಐಂದ್ರಜಾಲಿಕಮ್
42 ಅಂಜನಮ್
43 ನರಪೃಷ್ಠಿವಂಚನಂ = ಕಣ್ಕಟ್ಟು
44 ಸ್ವರವಂಚನಂ = ಧ್ವನಿಭ್ರಮೆ ಉಂಟುಮಾಡುವುದು
45* ಮಣಿಸಿದ್ಧಿ
46* ಮಂತ್ರ ಸಿದ್ಧಿ
47* ಔಷಧ ಸಿದ್ಧಿ
48 ಚೋರಕರ್ಮ
49* ವೃತ್ರಕ್ರಿಯಾ = ವೃತ್ರ ಎಂಬ ಜಾತಿಯ ಕಲ್ಲಿನ ಕೆಲಸ
50* ಲೋಹಕ್ರಿಯಾ
51 ಅಶ್ಮಕ್ರಿಯಾ = ಕಲ್ಲಿನ ಕೆಲಸ (ಶಿಲ್ಪ?)
52 ಮೃತ್ಕ್ರಿಯಾ = ಮಣ್ಣಿನ ಕೆಲಸ
53 ದಾರುಕ್ರಿಯಾ = ಮರಗೆಲಸ
54 ವೇಣುಕ್ರಿಯಾ = ಬಿದಿರು ಕೆಲಸ
55* ಚರ್ಮಕ್ರಿಯಾ = ಶಸ್ತ್ರಗಳನ್ನು ಮಾಡುವುದು
56* ಅಂಜನಕ್ರಿಯಾ
57 ಅದೃಶ್ಯಕರಣ
58 ದೂರಕರಣ
59 ಮೃಗಯಾರತಿ = ಮೃಗಗಳ ಬೇಟೆ
60 ವಾಣಿಜ್ಯಮ್
61 ಪಾಶುಪಾಲ್ಯಮ್
62 ಕೃಷಿ
63* ಆಹವಕರ್ಮ = ಯುದ್ಧ ಮಾಡುವುದು
64* ಲಾವಕುಕ್ಕುಟ ಮೇಷಾದಿ ಯುದ್ಧ ಕಾರಣ ಕೌಶಲಮ್

**ವಿಶೇಷ :** ಚೋರ ಕರ್ಮ, ಅಥವ ಕಳ್ಳತನ ಮಾಡುವ ಕಲೆ ಈ ಪಟ್ಟಿಯಲ್ಲಿ ಮತ್ತು ಲಲಿತಾ ಸಹಸ್ರನಾಮ ಭಾಷ್ಯದಲ್ಲಿ ಮಾತ್ರ ಇವೆ. ಬೇರೆ ಯಾವ ಗ್ರಂಥಕರ್ತರೂ ಇದನ್ನೊಂದು ಕಲೆ ಎಂದು ಪರಿಗಣಿಸಿಲ್ಲದಿರುವುದು ಗಮನಾರ್ಹ.

## ಶಿವತತ್ತ್ವ ರತ್ನಾಕರ

ಶಿವತತ್ತ್ವ ರತ್ನಾಕರದಲ್ಲಿ ಒಂದು ಪಟ್ಟಿಯುಂಟು. ಇದು ಮೇಲಿನ ಪಟ್ಟಿಗಿಂತ ಹೆಚ್ಚು ಭಿನ್ನವಾಗಿಲ್ಲ. ಕೇವಲ 19 ಕಲೆಗಳು ಬೇರೆಯಾಗಿವೆ. ಅವುಗಳನ್ನು ಮೇಲಿನ ಪಟ್ಟಿಯಲ್ಲಿ * ಸಂಕೇತದಿಂದ ಗುರುತಿಸಲಾಗಿದ್ದು ಅವುಗಳ ಬದಲಿಗೆ ಶಿವತತ್ತ್ವ ರತ್ನಾಕರದಲ್ಲಿರುವ ಕಲೆಗಳನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಹಿಂದಿನ ಪಟ್ಟಿಯಲ್ಲಿನ ಕ್ರಮಾಂಕಗಳನ್ನೇ ಇಲ್ಲಿ ಸೂಚಿಸಿದೆ.

3 ನ್ಯಾಯಶಾಸ್ತ್ರಮ್
11 ಸಮಸ್ಯಾವಧಾನಮ್ = ಅವಧಾನವಿದ್ಯೆ
16 ಸ್ವರ್ಣ ಪರೀಕ್ಷಾ
17 ತುರಗ ಲಕ್ಷಣಮ್
20 ಗಜಶಾಸ್ತ್ರಮ್

25 ದಶದೋಹಲವಿದ್ಯಾ
27 ಅಸಿಸ್ತಂಭ – ಕತ್ತಿಯ ಪೆಟ್ಟನ್ನು ಸ್ಥಗಿತಗೊಳಿಸುವುದು
29 ವಾಯುಸ್ತಂಭ
30 ಮೋಹನಮ್
39 ವಾಕ್ ಸಿದ್ಧಿ
45 ವಶ್ಯೌಷಧ ಸಿದ್ಧಿ
46 ಚಿತ್ರರೋಹಕ್ರಿಯ
47 ಚರ್ಮಕ್ರಿಯ = ಚರ್ಮಾರ ಕೆಲಸ
49 ಅಂಬರ ಕ್ರಿಯ = ನೇಯ್ಗೆ
50 ಆಸವ ಕರ್ಮ
55 ಮಹೇಂದ್ರ ಜಾಲ
56 ರತಿಕೌಶಲಮ್
63 ಲಾವುಕಾಯೋಧನ ಪ್ರೌಢಿ
64 ಮೇಷಯುದ್ಧಾದಿ ಕೌಶಲಮ್

## ಶುಕ್ರನೀತಿ ಸಾರ

ಶುಕ್ರನೀತಿ ಸಾರದಲ್ಲಿ 64 ಕಲೆಗಳ ಒಂದು ಪಟ್ಟಿಯುಂಟು. ಇದು ಬಹುಶಃ ಕ್ರಿ.ಶ. 10ನೆಯ ಶತಮಾನದಲ್ಲಿ ರಚಿತವಾದ ಗ್ರಂಥವೆಂದು ಭಾವಿಸಲಾಗಿದೆ. ಇಲ್ಲಿ ಪ್ರತಿಯೊಂದು ಕಲೆಯನ್ನೂ ಕೆಲವು ವಿಶೇಷಣಗಳೊಂದಿಗೆ ಹೆಸರಿಸಲಾಗಿದೆ. ಉದಾಹರಣೆ : ಮೊದಲನೆಯದಾದ ನಾಟ್ಯ-ಎಂಬುದನ್ನು "ಹಾವಭಾವಾದಿ ಸಂಯುಕ್ತಂ ನಾಟ್ಯಂ" ಎಂದು ಬಣ್ಣಿಸಿದೆ.

1 ನಾಟ್ಯ
2 ವಾದ್ಯ ನಿರ್ಮಾಣ ಮತ್ತು ವಾಹನ
3 ವಸ್ತ್ರಾಲಂಕಾರ
4 ಶಿಲ್ಪ
5 ಶಯ್ಯಾಸ್ತರಣ = ಹಾಸಿಗೆ ಸಿದ್ಧಪಡಿಸುವುದು
ಪುಷ್ಪಯೋಗ – ಹಾರಗಳನ್ನು ರಚಿಸುವುದು
6 ಜೂಜು, ಆಟಪಾಟಗಳು
7 ರತಿಕ್ರೀಡಾ ಕೌಶಲ
8 ಮದ್ಯಗಳನ್ನು ಮಾಡುವುದು
9 ಆಯುಧ, ಮುಳ್ಳುಗಳನ್ನು ತೆಗೆಯುವುದು
10 ರುಚಿಯಾಗಿ ಅಡಿಗೆಮಾಡುವುದು
11 ತೋಟಗಾರಿಕೆ
12 ಪಾಷಾಣ, ಧಾತುಗಳ ಭಸ್ಮಮಾಡುವಿಕೆ
13 ಬೆಲ್ಲ, ಸಕ್ಕರೆ ಮಾಡುವುದು
14 ಧಾತ್ವೌಷಧಿಗಳ ಮಿಶ್ರಣ
15 ಧಾತು ಮಿಶ್ರಣ ಮತ್ತು ಬೇರ್ಪಡಿಸುವುದು
16 ಧಾತು ಮಿಶ್ರಣದ ಪೂರ್ವಜ್ಞಾನ
17 ಲೋಹಗಳಿಂದ ಕ್ಷಾರ ಬೇರ್ಪಡಿಸುವಿಕೆ
18 ಶಸ್ತ್ರಸಂಧಾನಕ್ಕೆ ಅಗತ್ಯವಾದ ನ್ಯಾಸ
19 ವಿವಿಧ ಪಟ್ಟುಗಳಿಂದ ಮಲ್ಲಯುದ್ಧ ಮಾಡುವಿಕೆ
20 ಯಂತ್ರಗಳಿಂದ ಆಯುಧ ಪ್ರಯೋಗ
21 ವಾದ್ಯ ಸಂಕೇತಗಳಿಂದ ವ್ಯೂಹರಚನೆ
22 ಯುದ್ಧಕ್ಕಾಗಿ ಆನೆ ಕುದುರೆಗಳ ಸಂಯೋಜನೆ

23 ದೇವತಾ ಪ್ರೀತಿಗಾಗಿ ಆಸನ, ಮುದ್ರೆಗಳ ಕಲಿಕೆ
24 ಸಾರಥ್ಯ, ರಥ ನಡೆಸುವಿಕೆ
25 ಆನೆ, ಕುದುರೆಗಳಿಗೆ ನಡಿಗೆ ಕಲಿಸುವಿಕೆ
26 ಮಣ್ಣು, ಮರ, ಕಲ್ಲು, ಲೋಹಗಳಿಂದ ಕುಂಭ ರಚನೆ
27 ಚಿತ್ರಕಲೆ
28 ರೆ, ಕೊಳ, ಮನೆಗಳನ್ನು ನೆಲಸಮಗೊಳಿಸುವಿಕೆ
29 ಸಂಗೀತ ವಾದ್ಯ, ನೀರೆತ್ತುವ ಯಂತ್ರಗಳ ರಚನೆ
30 ಮದ್ಯಸಾರ ಮಿಶ್ರಣದಿಂದ ಬಟ್ಟೆಗೆ ಬಣ್ಣಹಾಕುವುದು
31 ನೀರು ಬೆಂಕಿ ಗಾಳಿಗಳ ಸಂಯೋಗ, ನಿರೋಧಗಳಿಂದ ಕೆಲಸಮಾಡುವುದು
32 ನೌಕೆ, ರಥಗಳನ್ನು ನಡೆಸುವ ಜ್ಞಾನ
33 ಹಗ್ಗ ಹೆಣೆಯುವುದು
34 ನೇಯಿಗೆ
35 ರತ್ನ ಪರೀಕ್ಷೆ
36 ಚಿನ್ನ ಮುಂತಾದ ಲೋಹ ಜ್ಞಾನ
37 ನಕಲಿ ಚಿನ್ನ, ರತ್ನಗಳ ತಯಾರಿ
38 ಚಿನ್ನದ ಆಭರಣಗಳನ್ನು ಮಾಡುವಿಕೆ
39 ಲೆಪ್ಪ, ಬಣ್ಣಹಾಕುವುದು
40 ಚರ್ಮ ಮೃದುಮಾಡುವುದು
41 ಪಶುಗಳ ಚರ್ಮ ಸುಲಿಯುವಿಕೆ
42 ಹಾಲು, ಮೊಸರು, ಬೆಣ್ಣೆ, ತುಪ್ಪಗಳ ಜ್ಞಾನ
43 ಧರಿಸುವ ಬಟ್ಟೆಗಳನ್ನು ಹೊಲಿಯುವುದು
44 ನೀರುಹರಿಸುವ ವಿಧಾನ
45 ಮನೆಯ ಪಾತ್ರೆಗಳನ್ನು ತೊಳೆಯುವುದು
46 ಬಟ್ಟೆ ಒಗೆಯುವುದು
47 ಕ್ಷೌರಮಾಡುವುದು
48 ಎಳ್ಳು, ಮಾಂಸಗಳ ಕಲೆಗಳನ್ನು ತೊಳೆಯುವುದು
49 ನೇಗಿಲುಹೊಡೆಯುವುದು, ಬಿತ್ತುವುದು ಇತ್ಯಾದಿ
50 ಮರನೆಡುವುದು, ಬೆಳೆಸುವುದು
51 ಸೇವೆಯಿಂದ ಸಂತೋಷಪಡಿಸುವುದು
52 ಬಿದಿರು, ಹುಲ್ಲಿನಿಂದ ಬುಟ್ಟಿ ಹೆಣೆಯುವುದು
53 ಗಾಜಿನ ಪಾತ್ರೆಗಳ ಜ್ಞಾನ
54 ನೀರು ಚಿಮುಕಿಸುವಿಕೆ
55 ಲೋಹದ ಆಯುಧಗಳ ತಯಾರಿ
56 ಆನೆ, ಕುದುರೆ, ಒಂಟೆಗಳಿಗೆ ಜೀನು ತಯಾರಿಸುವುದು
57 ಮಕ್ಕಳ ರಕ್ಷಣೆ, ಆಟ ಆಡಿಸುವುದು
58 ಅಪರಾಧಿಗಳನ್ನು ಒದೆಯುವುದು
59 ವಿವಿಧ ದೇಶಗಳ ಲಿಪಿ ಜ್ಞಾನ
60 ತಾಂಬೂಲ ಸಿದ್ಧ ಪಡಿಸುವಿಕೆ
61 ಕಲೆಗಳನ್ನು ಕಲಿಯುವುದು
62 ಶೀಘ್ರವಾಗಿ ಕಾರ್ಯ ನಿರ್ವಹಿಸುವಿಕೆ
63 ಕಲೆಗಳನ್ನು ಕಲಿಸುವುದು
64 ವಿಳಂಬವಾಗಿ ಕೆಲಸಮಾಡುವುದು

## ಕಲ್ಪಸೂತ್ರ : ಕಲ್ಪಾಂತರವಾಚಾನಿ

ಈ ಸೂತ್ರ ಗ್ರಂಥದ ಕರ್ತೃವಾಗಲಿ, ಕಾಲವಾಗಲಿ ಸ್ಪಷ್ಟವಾಗಿಲ್ಲ. ಕಲ್ಪಾಂತರ ವಾಚ್ಯಾನಿ ಎಂಬುದು ಕಲ್ಪಸತ್ರದ ವ್ಯಾಖ್ಯಾನ ಎಂದು ಡಾ॥ ವೆಂಕಟಸುಬ್ಬಯ್ಯನವರು ತಿಳಿಸುತ್ತಾರೆ. ಈ ಗ್ರಂಥದಲ್ಲಿ 72 ಕಲೆಗಳನ್ನು ಪಟ್ಟಿ ಮಾಡಲಾಗಿದೆಯಲ್ಲದೆ "ಮಹಿಳಾಗುಣಃ" ಎಂದು ಮಹಿಳೆಯರೇ ಕಲಿಯ ಬೇಕಾದ 64 ಕಲೆಗಳ ಪಟ್ಟಿಯೂ ಒಂದುಂಟು.

ಮೊದಲನೆ ಪಟ್ಟಿಯಲ್ಲಿ ಸಾಮಾನ್ಯವಾಗಿ ಎಲ್ಲರೂ ಹೆಸರಿಸಿರುವ ಸಂಗೀತ, ನೃತ್ಯ, ವಿವಿಧ ವಾದ್ಯಜ್ಞಾನ ಮೊದಲಾದವುಗಳು, ಯುದ್ಧ ಆಡಳಿತಕ್ಕೆ ಸಂಬಂಧಪಟ್ಟ ವಿಷಯಗಳೂ ಉಂಟು. ಮುಖದಮೇಲಿನ ಸುಕ್ಕನ್ನು ನಿವಾರಿಸುವುದು, ಬಿಳಿಯ ಕೂದಲು ನಿವಾರಣೆಗಳನ್ನು ಇಲ್ಲಿ ಕಲೆಗಳೆಂದು ಹೆಸರಿಸಲಾಗಿದೆ.

"ಮಹಿಳಾಗುಣ"ಗಳೆಂದು ನೀಡಲಾಗಿರುವ ಪಟ್ಟಿಯಲ್ಲಿ ಸಂಗೀತ. ಅಂಗರಾಗ, ಆಭರಣ ಜ್ಞಾನ, ಶಯ್ಯಾರಚನೆ ಪುಷ್ಪಾಸ್ತರಣ ಮೊದಲಾದ ಕಲೆಗಳಿಲ್ಲದಿರುವುದೂ, ಜಲಸ್ತಂಭ, ಗಜ ತುರಗ ಪರೀಕ್ಷೆ ಘಟಭ್ರಮ ಮೊದಲಾದವುಗಳನ್ನು ಸೇರಿಸುವುದೂ ಕುತೂಹಲಕಾರಿ. ದಂಭ = ಅಹಂಕಾರ ವಿತಂಡವಾದವುಗಳನ್ನು "ಮಹಿಳಾಗುಣ"ಗಳೆಂದು ಇಲ್ಲಿ ಹೆಸರಿಸಲಾಗಿದೆ.

ಡಾ॥ ವೆಂಕಟಸುಬ್ಬಯ್ಯನವರು ತಮ್ಮ ಪುಸ್ತಕದಲ್ಲಿ ಉದ್ಧರಿಸದಿರುವ ಎರಡು ಪಟ್ಟಿಗಳನ್ನಿಲ್ಲಿ ಕೊಡಲಾಗಿದೆ. ಇವುಗಳಲ್ಲಿ ಮೊದಲನೆಯದು ಲಲಿತಾ ಸಹಸ್ರನಾಮದ ಭಾಸ್ಕರರಾಯರ ವ್ಯಾಖ್ಯಾನದಲ್ಲಿ ವಿವರಿಸಲಾಗಿರುವ ಪಟ್ಟಿ. ಲಲಿತಾಸಹಸ್ರನಾಮದ 236ನೆಯ ನಾಮವಾದ 'ಚತುಃಷಷ್ಟಿ ಕಲಾಮಯಿೂ' ಎಂಬುದಕ್ಕೆ ವ್ಯಾಖ್ಯಾನಮಾಡುತ್ತಾ ಭಾಸ್ಕರರಾಯರು– "ಈ ಕಲೆಗಳನ್ನು ಸಾರಂಗಧರೀಯ ಶ್ರೀಧರನ ಕಥಾಕೋಶ, ಲಕ್ಷ್ಮೀಪಿಟಿಕಗಳಲ್ಲಿ ಪಟ್ಟಿಮಾಡಿ ಕೊಡಲಾಗಿದೆ. ಆದರೆ ನಾನಿಲ್ಲಿ ಉಲ್ಲೇಖಿಸಿರುವುದು ಅವುಗಳಿಗಿಂತ ಬೇರೆ ಯಾಗಿದೆ" ಎಂದಿದ್ದಾರೆ.

## ಲಲಿತಾ ಸಹಸ್ರನಾಮ 64

1 ಹದಿನೆಂಟು ಲಿಪಿಗಳ ಜ್ಞಾನ
2–3 ಅವುಗಳನ್ನು ಓದುವುದು, ಬರೆಯುವುದು
4 ವಿವಿಧ ಭಾಷಾಜ್ಞಾನ
5 ಆ ಭಾಷೆಗಳಲ್ಲಿ ಕವನ ರಚಿಸುವ ಸಾಮರ್ಥ್ಯ
6 ದ್ಯೂತ ಜ್ಞಾನ

7–14 ವೇದಗಳು-4 (ಋಕ್, ಯಜು, ಸಾಮ, ಅಥರ್ವ) ಉಪವೇದಗಳು-4 (ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಸ್ಥಾಪತ್ಯಶಾಸ್ತ್ರ = ಯಂತ್ರವಿಜ್ಞಾನ)

15–26 ಶಾಸ್ತ್ರಾಂಗಗಳು ಎರಡು ಆರು = 12 :

(ಅ) 1. ಶಿಕ್ಷಾ 2. ವ್ಯಾಕರಣ 3. ಛಂದಸ್ 4. ನಿರುಕ್ತ 5. ಜ್ಯೋತಿಷ 6. ಕಲ್ಪ.

(ಆ) 1. ವೈಶೇಷಿಕ 2. ನ್ಯಾಯ 3. ವೇದಾಂತ 4. ಸಾಂಖ್ಯ 5. ಯೋಗ 6. ವೇದ ಅಥವಾ 1. ಶೈವ 2. ವೈಷ್ಣವ 3. ಶಾಕ್ತ 4. ಸೌರ 5. ಗಾಣಾಪತ್ಯ 6. ಸ್ಕಂದ

27 ತಂತ್ರಗಳು
28 ಪುರಾಣಗಳು
29 ಸ್ಮೃತಿ
30 ಕಾವ್ಯ
31 ಅಲಂಕಾರ
32 ನಾಟಕ
33–38 ಷಟ್ಕ್ರಿಯೆಗಳು : ಶಾಂತಿ, ವಶ್ಯ, ಆಕರ್ಷಣ, ವಿದ್ವೇಷ, ಉಚ್ಚಾಟನ, ಮಾರಣ
39–45 ಸ್ತಂಭ ಸಪ್ತಕ : ಗತಿ, ಜಲ, ದೃಷ್ಟಿ, ಅಗ್ನಿ, ಆಯುಧ, ವಾಕ್, ರೇತಸ್ಸು
46–49 ಗಜ, ಹಯ, ರಥ, ನರಶಿಕ್ಷಣ
50–53 ಸಾಮುದ್ರಿಕ, ಮಲ್ಲಯುದ್ಧ, ಪಾಕವಿದ್ಯ, ಗಾರುಡವಿದ್ಯ
54 ಸುಷಿರಾ = ವಾಯುವಾದ್ಯ = ಕೊಳಲು ಇತ್ಯಾದಿ
55 ಅವನದ್ಧ = ತಾಳವಾದ್ಯಗಳು = ತಬಲ, ಮೃದಂಗ ಇತ್ಯಾದಿ

56 ಘನ = ತಾಳವಾದ್ಯಗಳು = ಕಂಚಿನ ತಾಳ ಇತ್ಯಾದಿ
57 ಇಂದ್ರಜಾಲ
58 ನೃತ್ತ
59 ಸಂಗೀತ
60 ರಸವಾದ
61 ರತ್ನ ಪರೀಕ್ಷೆ
62 ಚೌರ್ಯ
63 ನಾಡೀಶಾಸ್ತ್ರ
64 ಅದೃಶ್ಯವಾಗುವಿಕೆ

ಚಾಲುಕ್ಯ ಸೋಮದೇವನ ಅಭಿಲಷಿತಾರ್ಥಚಿಂತಾಮಣಿಯಲ್ಲಿ 32 ಕಲೆಗಳ ಒಂದು ಪಟ್ಟಿ ಉಂಟು. 64ಕ್ಕಿಂತ ಕಡಿಮೆ ಕಲೆಗಳನ್ನು ಪಟ್ಟಿ ಮಾಡಿಕೊಟ್ಟಿರುವುದು ಇದು ಮೂರನೆಯ ಗ್ರಂಥ. ಸೂತ್ರಾಲಂಕಾರದಲ್ಲಿ 47, ಕಾದಂಬರಿಯಲ್ಲಿ 48 ಕಲೆಗಳ ಪಟ್ಟಿಗಳಿವೆ.

**ಅಭಿಲಷಿತಾರ್ಥ ಚಿಂತಾಮಣಿ : 32**

1 ಕೆರೆ, ಕೊಳಗಳ ಲಕ್ಷಣ
2 ಪೂಜಾವಿಗ್ರಹದ ಲಕ್ಷಣ
3 ಗಜಲಕ್ಷಣ-ರೋಗ ಚಿಕಿತ್ಸೆ
4 ಭೂಗತ ನಿಧಿದರ್ಶನೋಪಾಯ
5 ರತ್ನಗಳ ಉತ್ಪತ್ತಿ, ಸ್ಥಾನರಕ್ಷಣೆ
6 ಧಾತುವಾದ
7 ವಜ್ರಪರೀಕ್ಷಾ ವಿಧಿ
8 ಕೃತ್ರಿಮ ರತ್ನಪರೀಕ್ಷಾ
9 ಅಶ್ವ ಲಕ್ಷಣ-ಚಿಕಿತ್ಸಾಜ್ಞಾನ ಸಹಿತ
10 ಶಕುನ ವಿಚಾರ
11 ಗೃಹನಿರ್ಮಾಣ ವಿಧಾನ
12 ಆಲೇಖ್ಯ – ಚಿತ್ರರಚನಾ ವಿಧಾನ
13 ವಿಗ್ರಹ ಲಕ್ಷಣವ್ಃ
14 ಸ್ನಾನ ಗೇಹಾದಿ ವಿಧಾನಮ್
15 ಸ್ನಾನವಿಭೋಗ
16 ಪಾದುಕಾಭೋಗ
17 ತಾಂಬೂಲಭೋಗ
18 ವಿಲೇಪನೋಪ ಭೋಗ
19 ವಸ್ತ್ರಭೋಗ
20 ಮಾಲ್ಯಭೋಗ
21 ಭೂಷಣಭೋಗ
22 ಆಸನಭೋಗ
23 ಚಾಮರಭೋಗ
24 ಆಸ್ಥಾನಭೋಗ
25 ಪುತ್ರೋಪಭೋಗ
26 ಸಾಮುದ್ರಿಕಾ
27 ಅನ್ನಭೋಗ
28 ಪಾನೀಯಭೋಗ
29 ಯಾನಭೋಗ
30 ಛತ್ರಭೋಗ
31 ಶಯ್ಯಾಭೋಗ
32 ಧೂಪಭೋಗ

# ಗ್ರಂಥ ಋಣ


ವಾತ್ಸ್ಯಾಯನ ಕಾಮಸೂತ್ರ :
ಯಶೋಧರ ವ್ಯಾಖ್ಯಾನ, ಮೋಡಿಚರ್ಲ ಆಂಜನೇಯ ಶಾಸ್ತ್ರೀ
ಭಾಸ್ಕರ ನರಸಿಂಹರ ತೆಲುಗು ವ್ಯಾಖ್ಯಾನ, ದೇವಧರ ಶಾಸ್ತ್ರೀ – ಹಿಂದಿ ಅನುವಾದ

The Kalas :
Dr. A. Venkata Subbaiah

ಶುಕ್ರನೀತಿಸಾರ

ಕೌಟಿಲ್ಯನ ಅರ್ಥಶಾಸ್ತ್ರ

Sixtyfour arts :
Anil Baran Ganguly

ನಾಟ್ಯಶಾಸ್ತ್ರ

ಸಂಗೀತ ರತ್ನಾಕರ

ಅಭಿಲಷಿತಾರ್ಥ ಚಿಂತಾಮಣಿ

ನಾರದೀಯ ಪುರಾಣ

ಮತ್ಸ್ಯಪುರಾಣ

ವಿಷ್ಣುಧರ್ಮೋತ್ತರ ಪುರಾಣ

The Indian Craftsman -
Dr. A. Coomara Swamy

ಭಾರತೀಯ ಸಂಸ್ಕೃತಿ :
ಡಾ॥ ಎಸ್. ಶ್ರೀಕಂಠಶಾಸ್ತ್ರೀ

ಮುದ್ರಕರು ಮತ್ತು ಪ್ರಕಾಶಕರು

**ಡಾ॥ ಪಿ. ವೀರಣ್ಣ**
ನಿರ್ದೇಶಕರು
ಪ್ರಸಾರಾಂಗ ಮತ್ತು ಮುದ್ರಣಾಲಯ
ಬೆಂಗಳೂರು ವಿಶ್ವವಿದ್ಯಾಲಯ

ಪ್ರತಿಗಳು ದೊರೆಯುವ ಸ್ಥಳ

**ಹೆಚ್. ಪುಂಡಲೀಕ**
ಸಹಾಯಕ ನಿರ್ದೇಶಕರು
ಪ್ರಸಾರಾಂಗ ಮಾರಾಟ ಮಳಿಗೆ
ಅರಮನೆ ರಸ್ತೆ, ಸೆಂಟ್ರಲ್ ಕಾಲೇಜು ಆವರಣ
ಬೆಂಗಳೂರು-560 001